ಶೈವದಂತೆ ಒಪ್ಪಿದ್ದಾರೆ. ಆದರೆ ಲಕುಲೀಶ ಮತದಲ್ಲಿ ಕಾರ್ಯವೆನಿಸಿ ಚಿತ್-ಅಚಿತ್ ಎಂದು ಕರೆಯುವ ಚೇತನಾಚೇತನರೂಪವಾದ ಜೀವ-ಜಗತ್ತುಗಳಿಗೆ ಪತಿಗಿಂತ ಬೇರೆ ಸ್ವತಂತ್ರಸತ್ತೆಯನ್ನು ಒಪ್ಪುವುದಿಲ್ಲ: ಬದಲಾಗಿ ಲಕುಲೀಶನ ಭೇದಾಭೇದ ದಂತೆ ಜೀವ-ಜಗತ್ತುಗಳು ಪತಿಶಕ್ತಿಯಲ್ಲಿರುವುದಾಗಿ ಒಪ್ಪುತ್ತಾನೆ. ಒಟ್ಟಿನಲ್ಲಿ ಚಿದಚಿತ್ತುಗಳೆಂಬ ಪಶುಪಾಶಗಳು ಶರೀರಿಗೆ ಶರೀರದಂತೆ ಹಾರ್ಯ-ಧಾರ್ಯ-ಕಾರ್ಯಗಳು ಪತಿಗೆ ಪ್ರಧಾನವಲ್ಲ-ಗೌಣ; ಇದನ್ನು ಸಮರ್ಥಿಸುವ ರಾಶೀಕರನ ಉಕ್ತಿ ಇದು– "ಕಾರ್ಯಸ್ಯ ರುದ್ರೇ ಹಾರ್ಯ-ಧಾರ್ಯ-ಕಾರ್ಯಖ್ಯಾಪನಾರ್ಥಂ" (ಪಾ. ಸು. ಪು. ೬೪).

೩. ಕಾರ್ಯಕಾರಣಗಳಿಗೆ ಅಪೃಥಕ್‌ಸಿದ್ಧತ್ವ; ಎಂದರೆ—ಶ್ರೀಕಂಠ ಮತದಲ್ಲಿ ಕಾರ್ಯಕಾರಣಗಳಿಗೆ ಪೃಥಕ್‌ಸಿದ್ಧಿ ಇಲ್ಲ. ಜಗತ್ತಿನ ಜನ್ಮ-ಸ್ಥಿತಿ ಪ್ರವೃತ್ತಿಗಳು ಬ್ರಹ್ಮನಿಗೆ ಅಪೃಥಕ್ ಸಿದ್ಧವಾದ್ದರಿಂದ ಜಗತ್ತು ಬ್ರಹ್ಮನಿಗಿಂತ ಬೇರೆ ಅಲ್ಲವೆಂಬುದೂ ಲಕುಲೀಶ ಪಾಶುಪತಮತವನ್ನು ಅನುಸರಿಯೇ ಇದೆ.

ಪಾಲಕನು ನಿತ್ಯ; ಪಾಲಕನು ನಿತ್ಯನಾದ್ದರಿಂದ ಅವನು ಪಾಲಿಸುವ ಜೀವ-ಜಗತ್ತುಗಳೂ ನಿತ್ಯವೇ. ಪಾಲ್ಯವೇ ಇಲ್ಲದಲ್ಲಿ ಪಾಲಕನು ಹೇಗಾದಾನು ? (ಪಾ. ಸೂ. ಪು. ೬೦).

೪. ಅಂತರ್ಗಣಿಕಭೇದ*—ಎಂದರೆ ಶಿವನಲ್ಲಿ ಅಂತರ್ಗತವಾಗಿರುವ ಪಶು-ಪಾಶವೆಂಬ ಗಣಭೇದ. ಇದನ್ನು ಶ್ರೀಕಂಠಶಿವಾಚಾರ್ಯರೂ ಒಪ್ಪಿರುವರು ಎಂಬ ಅಂಶವು ಶ್ರೀಕಂಠಭಾಷ್ಯ ಟೀಕೆ (ಅಪ್ಪಯ್ಯ ದೀಕ್ಷಿತ ವಿರಚಿತ ಶಿವಾರ್ಕಮಣಿ ದೀಪಿಕಾ ಪು. 31) ಯಿಂದ ವೇದ್ಯವಾಗುತ್ತದೆ. ಇದನ್ನೇ ರಾಮಾನುಜರು 'ಸ್ವಗತಭೇದ' ಎಂದಿರುವುದು.

## ದ್ವೈತಶೈವ ಸಿದ್ಧಾಂತದ ಪ್ರಭಾವ

ಹಿಂದೆ ಹೇಳಿದ ಅಂಶಗಳಲ್ಲಿ ಶ್ರೀಕಂಠಶಿವಾಚಾರ್ಯರು ಲಕುಲೀಶ ದರ್ಶನ ದಿಂದ ಪ್ರಭಾವಿತರಾಗಿರುವರಲ್ಲದೆ ಅವರು ಸಂಪೂರ್ಣವಾಗಿ ದ್ವೈತಶೈವ ಸಿದ್ಧಾಂತ ಪ್ರಭಾವಶೂನ್ಯರಾಗಿರಲಿಲ್ಲ ಏಕೆಂದರೆ ಶ್ರೀಕಂಠದರ್ಶನವು ದ್ವೈತಶೈವ ಸಿದ್ಧಾಂತ

* ಗಣಃ–ಸಮೂಹಃ, ಅಂತರ್ವಿದ್ಯಮಾನೋ ಗಣಃ, ಅಂತರ್ಗಣಃ, ಅಂತರ್ಗಣೇ ವಿದ್ಯತ ಇತಿ ಅಂತರ್ಗಣಿಕಃ, ಅಂತರ್ಗಣಿಕಶ್ಚಾಸೌ ಭೇದಶ್ಚ ಅಂತರ್ಗಣಿಕಭೇದಃ, ಶಿವಾಂತರ್ಗತ ಪಶುಪಾಶರೂಪಗಣನಿಷ್ಠಃ.

ದಿಂದ ಪತಿ-ಪಶು-ಪಾಶ ಎಂಬ ಪದಾರ್ಥ-ತ್ರಯವನ್ನು ಮಾತ್ರವೇ ಅಲ್ಲದೆ ಜೀವನ ಅಣುತ್ವ, ಶಿವಸಾಮ್ಯರೂಪ ಮೋಕ್ಷ, ಮೋಕ್ಷದಲ್ಲಿ ಸರ್ವಜ್ಞತ್ವ ಮತ್ತು ಸರ್ವ ಕರ್ತೃತ್ವಗಳ ಅಭಿವ್ಯಕ್ತಿವಾದ ಮೊದಲಾದುವನ್ನು ಸ್ವೀಕರಿಸಿದೆ.

ಇದರಿಂದ ಸ್ಪಷ್ಟಪಡುವುದೇನೆಂದರೆ—ಸೃಷ್ಟಿಯಲ್ಲಿ ಸ್ಥೂಲರೂಪದಿಂದಲೂ ಪ್ರಳಯದಲ್ಲಿ ಸೂಕ್ಷ್ಮರೂಪದಿಂದಲೂ ಪತಿಯಲ್ಲಿ ಅಡಗಿ ಹಾರ್ಯ-ಧಾರ್ಯ-ಕಾರ್ಯಗಳಲ್ಲಿ ಅಸ್ವತಂತ್ರವಾಗಿರುವುದರಿಂದಲೇ ಗೌಣವೆನಿಸಿರುವ, ಪತಿಗೆ ಅವಿನಾಭೂತವೂ, ಅಪೃಥಕ್ ಸಿದ್ಧವೂ, ಪರಸ್ಪರಭಿನ್ನವೂ ಆದ ಜಡಚೇತನಗಳಿಗೆ ಮತ್ತು ಪತಿಗೆ ಅವಿನಾಭೂತವಾದ ಶಕ್ತಿಗೆ ವಿಶೇಷಣತ್ವವನ್ನು ಮಾತ್ರ ಹೇಳುವುದರ ಮೂಲಕ ಲಕುಲೀಶ ಭೇದಾಭೇದಕ್ಕಿಂತ ಶ್ರೀಕಂಠ ವಿಶಿಷ್ಟಾದ್ವೈತವು ವೈಶಿಷ್ಟ್ಯವನ್ನು ಪಡೆದಿದೆ. ರಾಮಾನುಜರ ವಿಶಿಷ್ಟಾದ್ವೈತವೂ ಸಹ ಶ್ರೀಕಂಠರ ಸರಣಿಯನ್ನೇ ಅನುಸರಿಸಿದೆ.

## ರಾಮಾನುಜೀಯ ವಿಶಿಷ್ಟಾದ್ವೈತದ ಮುಖ್ಯಾಂಶಗಳು

ರಾಮಾನುಜಾಚಾರ್ಯರು ತಮ್ಮ ಗುರು ಯಾದವಪ್ರಕಾಶಕರು ಒಪ್ಪಿದ್ದ "ಚಿದಚಿದೀಶ್ವರಕಾರಣಂ ಬ್ರಹ್ಮ" ಎಂಬ ವಾದವನ್ನು ಒಪ್ಪಿಲ್ಲವಾದರೂ ರಾಮಾನುಜ ಮತವು ಚಿತ್-ಅಚಿತ್-ಈಶ್ವರ ಎಂಬ ತ್ರಿಕವನ್ನು ಒಪ್ಪಿದೆ. ಈ ಸಿದ್ಧಾಂತದಲ್ಲಿ ಬ್ರಹ್ಮವು ಈಶ್ವರನಿಗಿಂತ ಬೇರೆ ಅಲ್ಲ. ಈಶ್ವರನೇ ಪರಮಕಾರಣ ಮತ್ತು ಪರಮದ್ರವ್ಯ. ಸತ್ಕಾರ್ಯವಾದಕ್ಕೆ ಅನುಗುಣವಾಗಿ ಎಲ್ಲಕಾರ್ಯವೂ ಕಾರಣದಲ್ಲಿ ಸೂಕ್ಷ್ಮರೂಪದಿಂದ ಇರುತ್ತದೆ. ಅವಸ್ಥಾಂತರಾಪತ್ತಿಯೇ ಪರಿಣಾಮ. ಅದೇ ಕಾರ್ಯತ್ವ. ಸ್ವಗತಭೇದ, ಅಪೃಥಕ್‌ಸಿದ್ಧಿಸಂಬಂಧ ಮತ್ತು ವಿಶೇಷಣ ಲಕ್ಷಣ ಎಂಬುದು ರಾಮಾನುಜರ ವಿಶಿಷ್ಟಾದ್ವೈತವಾದ.

### ೧. ಈಶ್ವರ

ಎಲ್ಲ ಅನುಭವವೂ ಸಗುಣ-ಸವಿಶೇಷವಸ್ತುವಿಷಯಕವಾದದ್ದು. ಎಲ್ಲ ಪ್ರಮಾಣಗಳೂ ಸವಿಶೇಷ ವಿಷಯಕಗಳು. "ನಿರ್ವಿಶೇಷವಸ್ತು" ಎಂಬುದಕ್ಕೆ ಯಾವ ಪ್ರಮಾಣವೂ ಇಲ್ಲ ನಿರ್ವಿಕಲ್ಪಕ ಪ್ರತ್ಯಕ್ಷದಲ್ಲಿಯೂ ಸವಿಶೇಷವಸ್ತುವೇ ತೋರುತ್ತದೆ.

ಸಾಕ್ಷಾತ್ಕಾರಕ್ಷಣೇಪ್ಯಸ್ತಿ ವಿಮರ್ಶಃ ಕಥಮನ್ಯಥಾ ।
ಧಾವನಾದ್ಯುಪಪದ್ಯೇತ ಅನುಸಂಧಾನವರ್ಜಿತಮ್ ॥

(ಉತ್ಪಲದೇವ)

ಆದ್ದರಿಂದ ಶ್ರೀರಾಮಾನುಜರು ನಿರ್ಗುಣಬ್ರಹ್ಮಕಲ್ಪನವು ಅನುಭವವಿರುದ್ಧ ಮತ್ತು ಅಪ್ರಮಾಣ ಎಂದು ಹೇಳಿ ಬ್ರಹ್ಮವು ಸಗುಣ ಮತ್ತು ಅದೇ 'ಈಶ್ವರ' ಎಂದಿದ್ದಾರೆ.

ಒಟ್ಟಿನಲ್ಲಿ ಈಶ್ವರ ಪ್ರಾಕೃತಗುಣರಹಿತ. ಕಲ್ಯಾಣಗುಣಾಕರ, ಅನಂತ ಜ್ಞಾನಾನಂದಸ್ವರೂಪ, ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳು ಅವನ ಇಚ್ಛೆಯ ಅಧೀನ. ಅವನು ಸಕಲಸಜಾತೀಯ-ವಿಜಾತೀಯ ಭೇದಶೂನ್ಯನಾದರೂ ಸ್ವಗತ ಭೇದವುಳ್ಳವನು. ಅಪೃಥಕ್ ಸಿದ್ಧಿಸಂಬಂಧವುಳ್ಳವುಗಳಾದ್ದರಿಂದಲೇ ತನಗೆ ಶರೀರ ವಾಗಿರುವ ಚಿದಚಿತ್ತುಗಳಿಗೆ ಪರಸ್ಪರ ಭೇದವನ್ನು ಈ ಸಿದ್ಧಾಂತ ಒಪ್ಪಿದೆ.

## ೨. ಅಪೃಥಕ್ ಸಿದ್ಧಿಸಂಬಂಧ

ಅಪೃಥಕ್‌ಸಿದ್ಧಿ ಸಂಬಂಧ ಕಲ್ಪನವೇ ರಾಮಾನುಜೀಯ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಆಧಾರ. ಎಂದರೆ ಈ ಸಿದ್ಧಾಂತದಲ್ಲಿ "ಶರೀರಿ" ಎನಿಸಿರುವ ಚಿತ್ "ಶರೀರ" ದಿಂದ ಎಂದಿಗೂ ಬೇರೆ (ಪೃಥಕ್) ಇರುವುದಿಲ್ಲ. ಸಂಸಾರ ದೆಶೆಯಲ್ಲಿ "ಸ್ಥೂಲಶರೀರ" ದೊಡನೆ ಇರುವಂತೆ ಪ್ರಳಯದಲ್ಲಿ "ಸೂಕ್ಷ್ಮಶರೀರ" ದೊಡನೆಯೂ, ಮೋಕ್ಷದಲ್ಲಿಯೂ ಸಹ "ಶುದ್ಧಸತ್ವಶರೀರ" ದೊಡನೆ ಚಿತ್ತಿಗೆ ಸಂಬಂಧವನ್ನು ಒಪ್ಪಲಾಗಿದೆ. ಶರೀರಿಯು ಶರೀರವನ್ನು ಧರಿಸಿದ್ದಾನೆ. ನಿಯಮಿಸುತ್ತಾನೆ ಮತ್ತು ತನ್ನ ಉಪಭೋಗಕ್ಕಾಗಿ ಅದನ್ನು ಕಾರ್ಯದಲ್ಲಿ ಪ್ರವರ್ತಿಸುತ್ತಾನೆ. ಆದ್ದರಿಂದ ಶರೀರಕ್ಕೆ ಶರೀರಿಯೊಡನೆಯೂ, ಚಿದಚಿತ್ತುಗಳಿಗೆ ಈಶ್ವರನೊಡನೆಯೂ ಸಂಬಂಧವನ್ನು ಒಪ್ಪಲಾಗಿದೆ. ಏಕೆಂದರೆ ಶರೀರಿಯು ಶರೀರವನ್ನು ಧರಿಸಿರುವಂತೆ ಈಶ್ವರನು ಚಿದಚಿತ್ತುಗಳನ್ನು ಧರಿಸಿದ್ದಾನೆ, ನಿಯಮಿಸುತ್ತಾನೆ ಮತ್ತು ಪ್ರೇರಿಸುತ್ತಾನೆ. ಇದೇ ಅಪೃಥಕ್‌ಸಿದ್ಧಿ. "ನಾಸ್ತಿ ಪೃಥಕ್ ಸಿದ್ಧಿರ್ಯಯೋರ್ಯೇಷಾಂ ವಾ ತಯೋಸ್ತೇಷಾಂ ವಾ ಸಂಬಂಧೋಽಪೃಥಕ್ ಸಿದ್ಧಿ ಸಂಬಂಧಃ" ಎಂಬುದು ಈ ಶಬ್ದದ ನಿರ್ವಚನ.

ಈಶ್ವರನು ಎಂದಿಗೂ ಚಿದಚಿತ್ತುಗಳಿಗಿಂತ ಬೇರೆ ಇರುವುದಿಲ್ಲ; ಆದರಂತೆ ಚಿದಚಿತ್ತುಗಳೂ ಸಹ ಈಶ್ವರನನ್ನು ಬಿಟ್ಟಿರುವುದಿಲ್ಲ. ಈ ಸಂಬಂಧವು ನ್ಯಾಯ-ವೈಶೇಷಿಕರು ಒಪ್ಪಿರುವ ಸಮವಾಯ ಸಂಬಂಧವಲ್ಲ. ಏಕೆಂದರೆ ಸಮವಾಯ ಸಂಬಂಧವು ಗುಣ-ಗುಣಿಗಳಿಗೆ ಇರುವಂತೆ ಅಯುತಸಿದ್ಧವೃತ್ತಿಯಾದ ನಿತ್ಯ ಸಂಬಂಧ ಇಲ್ಲಿ ಗುಣವು ಯಾವಾಗಲೂ ಗುಣಿಯನ್ನು ಬಿಟ್ಟಿರುವುದಿಲ್ಲ; ಗುಣಿಯೂ ಸಹ ಗುಣದ ಸಂಬಂಧವಿಲ್ಲದಿದ್ದರೆ ಗುಣಿ ಎನಿಸಲಾರದು. ಆದರೆ ನ್ಯಾಯ-ವೈಶೇಷಿಕಸಿದ್ಧಾಂತದಲ್ಲಿ – ಹುಟ್ಟುವ ದ್ರವ್ಯವು ಮೊದಲ ಕ್ಷಣದಲ್ಲಿ ನಿರ್ಗುಣವೂ ನಿಷ್ಕ್ರಿಯವೂ ಆಗಿರುತ್ತದೆ. ಅದರಂತೆ ಎಂದಿಗಾದರೂ, ಹೇಗಾದರೂ ಈಶ್ವರನಿಗೆ ನಿರ್ಗುಣತ್ವವು ಇರಬಲ್ಲುದೆ ? ಆದ್ದರಿಂದ ಇಲ್ಲಿ ಈಶ್ವರ ಮತ್ತು ಚಿದ ಚಿತ್ತುಗಳಿಗೆ ಸಮವಾಯ ಸಂಬಂಧವನ್ನು ಒಪ್ಪಿಲ್ಲ. ಹಾಗೆಯೇ ಒಂದೇ ಗುಣಕ್ಕೆ ಅನೇಕ ಗುಣಿ (ದ್ರವ್ಯ) ಗಳ ಸಂಬಂಧವೂ ಉಂಟು. ಉದಾ—ನೀಲ ಎಂಬ ಗುಣವು ಕೇವಲ ನೈದಿಲೆಯಲ್ಲಿಯೇ ಅಲ್ಲದೆ ಘಟಾದಿಗಳಲ್ಲಿಯೂ ಇರುತ್ತದೆ. ಗುಣಿಯಾದ ಈಶ್ವರನಿಗೆ ಚಿದಚಿತ್ತುಗಳ ವಿಯೋಗವು ಎಂದಿಗೂ ಆಗುವುದಿಲ್ಲ. ಚಿದಚಿತ್ತುಗಳೂ ಸಹ ಈಶ್ವರನ ಹೊರತು ಬೇರೆಯವರೊಡನೆ ಸಂಬಂಧವನ್ನು ಹೊಂದುವುದಿಲ್ಲ; ಏಕೆಂದರೆ ಬಾಹ್ಯವೆಂಬುದೇ ಇಲ್ಲವಾದ್ದರಿಂದ ಇಲ್ಲಿ ಅಪೃಥಕ್ ಸಿದ್ಧಿ ಸಂಬಂಧವನ್ನು ಒಪ್ಪಲಾಗಿದೆ.

## ೩. ವಿಶೇಷಣ ಸ್ವರೂಪ

ಅಪೃಥಕ್‌ಸಿದ್ಧಿ ಸಂಬಂಧವುಳ್ಳವುಗಳಲ್ಲಿ ಯಾವ ಆಧೇಯವು ನಿಯಮ್ಯವೂ ನಿಯೋಜ್ಯವೂ ಗೌಣವೂ ಆಗಿದೆಯೋ ಅದು ವಿಶೇಷಣ. ಆಧಾರವು ನಿಯಾಮಕವೂ ನಿಯೋಜಕವೂ ಮುಖ್ಯವೂ ಆದ್ದರಿಂದ ಅದು ವಿಶೇಷ್ಯ. ಚಿದಚಿದೀಶ್ವರರಲ್ಲಿ ಈಶ್ವರನು ನಿಯಾಮಕನಾದ್ದರಿಂದ ಆವನು ಪ್ರಧಾನ ಹಾಗೂ ವಿಶೇಷ್ಯ. ಚಿದ ಚಿತ್ತುಗಳು ನಿಯಮ್ಯವಾದ್ದರಿಂದ ಗೌಣವೂ ವಿಶೇಷಣವೂ ಎನಿಸಿವೆ. ಆದ್ದರಿಂದ ವಿಶೇಷ್ಯಭೂತನಾದ ಈಶ್ವರನಿಗೆ ಚಿದಚಿತ್ತುಗಳು ವಿಶೇಷಣ.

## ೪. ಅದ್ವೈತ

" ಏಕತ್ವಂ ಚ ಅಪೃಥಕ್‌ಸಿದ್ಧಿಃ " ಎಂಬುದು ರಾಮಾನುಜೀಯ ಮತ. ಚಿದಚಿದೀಶ್ವರರಿಗೆ ಅಪೃಥಕ್‌ಸಿದ್ಧಿ ಸಂಬಂಧವಿರುವುದರಿಂದ ವಿಶಿಷ್ಟನಾದ ಈಶ್ವರನಿಗೆ

ಅದ್ವೈತ ಎಂದರೆ ಏಕತ್ವ (ಅಭೇದ) ವನ್ನು ರಾಮಾನುಜ ಮತವು ಒಪ್ಪಿದೆ. ಆದ್ದರಿಂದ ಶರೀರಕ್ಕೆ ಶರೀರಿಯೊಡನೆಯೂ, ವಿಶೇಷಣಕ್ಕೆ ವಿಶೇಷ್ಯದೊಡನೆಯೂ ಅಂಶಗಳಿಗೆ ಅಂಶಿಯೊಡನೆಯೂ ಅಪೃಥಕ್‌ಸಿದ್ಧಿ ಸಂಬಂಧ (ಏಕತ್ವ) ವನ್ನು ಒಪ್ಪುವುದರಿಂದ ರಾಮಾನುಜೀಯ ಮತವು ವಿಶಿಷ್ಟಾದ್ವೈತ.

## ೫. ಸ್ವಗತಭೇದ

ಚಿದಚಿತ್ತುಗಳಾದ ಜಗಜ್ಜೀವರು ನಿತ್ಯರು ಮತ್ತು ಪರಸ್ಪರ ಭಿನ್ನರು. ಆದರೆ ಅವರಿಗಿರುವ ಭೇದವು ಅವರಿಗೆ ಸಮಾನಾಧಾರವಾಗಿರುವ ಈಶ್ವರನಲ್ಲಿ ಅಂತರ್ಗತವಾಗಿರುತ್ತದೆ. ಸ್ವತಂತ್ರನಾದ ಈಶ್ವರನಿಗಿಂತ ಹೊರಗೆ ಅವರಿಗೆ ಬೇರೆ ಅಸ್ತಿತ್ವ ಇಲ್ಲ. ಈಶ್ವರನಲ್ಲಿಯೇ ಅವರು ಪರಸ್ಪರ ಭಿನ್ನರಾಗಿರುತ್ತಾರೆ. ಆದ್ದರಿಂದ ಅವರ ಭೇದವೂ ಸಹ ಈಶ್ವರಾಂತರ್ಗತ. ಇದೇ ಸ್ವಗತಭೇದ. ಆದ್ದರಿಂದ ಈ ಮತದಲ್ಲಿ ಈಶ್ವರನು ಸಜಾತೀಯ ವಿಜಾತೀಯ ಭೇದರಹಿತನಾದರೂ ಸ್ವಗತ ಭೇದರಹಿತನಲ್ಲ.

ಈ ಜಗಜ್ಜೀವರು ಈಶ್ವರನಲ್ಲಿ ಎರಡು ಅವಸ್ಥೆಗಳಲ್ಲಿ ಇರುತ್ತಾರೆ; ಅವೇ ಸ್ಥೂಲಾವಸ್ಥೆ ಮತ್ತು ಸೂಕ್ಷ್ಮಾವಸ್ಥೆಗಳು. ಸೃಷ್ಟಿಯಲ್ಲಿ ಅವರಿಗೆ ಸ್ಥೂಲಾವಸ್ಥೆ, ಆದ್ದರಿಂದ ಸ್ಥೂಲ ಚಿದಚಿದೀಶ್ವರ ಅಥವಾ ತದ್ವಿಶಿಷ್ಟ ಈಶ್ವರ ಕಾರ್ಯಾವಸ್ಥೆಯಬ್ರಹ್ಮ ಎನಿಸುತ್ತಾನೆ. ಪ್ರಳಯದಲ್ಲಿ ಸೂಕ್ಷ್ಮಾವಸ್ಥೆ; ಆದ್ದರಿಂದ ಸೂಕ್ಷ್ಮ ಚಿದಚಿದೀಶ್ವರನು ಕಾರಣಾವಸ್ಥೆಯ ಬ್ರಹ್ಮ ಎನಿಸುವನು. ಒಟ್ಟಿನಲ್ಲಿ ಈಶ್ವರನು ಎಂದಿಗೂ ವಿಶೇಷ ಶೂನ್ಯನಲ್ಲ. ಒಟ್ಟಿನಲ್ಲಿ ಪರಮತತ್ತ್ವವು ಯಾವಾಗಲೂ ಸವಿಶೇಷವಾದ್ದರಿಂದ ರಾಮಾನುಜೀಯ ದರ್ಶನವು ವಿಶಿಷ್ಟಾದ್ವೈತ.

## ಶ್ರೀಕಂಠ ಮತ್ತು ರಾಮಾನುಜ ವಿಶಿಷ್ಟಾದ್ವೈತಗಳಿಗಿರುವ ಹೋಲಿಕೆ

ಶ್ರೀಕಂಠಶಿವಾಚಾರ್ಯರ ಶೈವವಿಶಿಷ್ಟಾದ್ವೈತದ ಮೇಲೆ ಲಕುಲೀಶನ ದ್ವೈತಾದ್ವೈತದ ಪ್ರಭಾವವು ಬಹಳವಾಗಿ ಕಂಡು ಬರುತ್ತದೆ. ಆದ್ದರಿಂದಲೇ ಈ ಮತವು ಬ್ರಹ್ಮನ ಸಗುಣತ್ವ, ಸತ್ಕಾರ್ಯವಾದ ಕಾರ್ಯಕಾರಣಗಳಿಗೆ ಅಪೃಥಕ್‌ಸಿದ್ಧತ್ವ. ಅಂತರ್ಗಣಿಕಭೇದ, ಪಶು-ಪತಿ ಅಥವಾ ಕಾರ್ಯ-ಕಾರಣಗಳಿಗೆ ಗುಣ-ಪ್ರಧಾನ ಭಾವಗಳನ್ನು ಸ್ವೀಕರಿಸಿ, ಗುಣಭೂತವಾದ ಪತಿಗೆ ಅವಿನಾ

ಭೂತವೂ, ಪತಿಗೆ ಅಪೃಥಕ್‌ಸಿದ್ಧವೂ ಪರಸ್ಪರ ಭಿನ್ನವೂ ಆದ ಪಶು ಪಾಶ ಎನಿಸಿರುವ ಜಡ ಮತ್ತು ಚೇತನಗಳಿಗೆ ; ಹಾಗೂ ಪತಿಗೆ ಅವಿನಾಭೂತವಾದ ಶಕ್ತಿಗೆ ಗುಣ ರೂಪತ್ವವನ್ನು ಹೇಳದೆ, ಗುಣವು ವಿಶೇಷಣ ಎಂದು ಭಾವಿಸಿ ವಿಶಿಷ್ಟಾದ್ವೈತವು ಸ್ಥಾಪಿತವಾಯಿತು. ಆದ್ದರಿಂದ ಲಕುಲೀಶನ ದ್ವೈತಾದ್ವೈತಕ್ಕೂ, ಚಿದಚಿದ್ರೂಪ ವಾದ ಪಶು-ಪಾಶಗಳಿಗೆ ಈಶ್ವರನೆಂಬ ಪತಿಯೊಡನೆ ಸಂಬಂಧವುಳ್ಳ ವಿಶಿಷ್ಟಾ ದ್ವೈತಕ್ಕೂ ಯಾವ ವ್ಯತ್ಯಾಸವೂ ಇಲ್ಲ.

ಇನ್ನು ರಾಮಾನುಜರ ವಿಶಿಷ್ಟಾದ್ವೈತಕ್ಕೂ ಈ ಮಾತು ಅನ್ವಯಿಸುತ್ತದೆ. ಏಕೆಂದರೆ ಶ್ರೀ ರಾಮಾನುಜರು ಶ್ರೀಕಂಠ ಶಿವಾಚಾರ್ಯರಂತೆ ಸತ್ಕಾರ್ಯವಾದ, ಕಾರ್ಯರೂಪ ಚಿದಚಿತ್ತುಗಳಿಗೆ ಈಶ್ವರನೊಡನೆ ಅಪೃಥಕ್‌ಸಿದ್ಧತ್ವ, ಈಶ್ವರನಲ್ಲಿ 'ಸ್ವಗತಭೇದ' ಎಂಬ ಹೆಸರಿನ ಅಂತರ್ಗಣಿಕಭೇದ, ಮತ್ತು ಚಿದಚಿತ್ತುಗಳು ಈಶ್ವರನಿಗಿಂತ ಗೌಣವಾದ್ದರಿಂದ ಅವು ಈಶ್ವರನಿಗೆ ವಿಶೇಷಣ ಎಂದೂ ಒಪ್ಪಿದ್ದಾರೆ. ಎಂದ ಮೇಲೆ ಲಕುಲೀಶಪಾಶುಪತ ಹಾಗೂ ದ್ವೈತ ಶೈವಪಾಶುಪತಗಳ ಪ್ರಭಾ ವವು ಶ್ರೀಕಂಠ ಹಾಗೂ ರಾಮಾನುಜರ ವಿಶಿಷ್ಟಾದ್ವೈತಗಳ ಮೇಲೆ ಸಾಕಷ್ಟು ಆಗಿಯೇ ಇದೆ ಎಂದು ಬೇರೆ ಹೇಳಬೇಕಾಗಿಲ್ಲ.

# ಶೈವ ವಿಶೇಷಾದ್ವೈತ

ಶೈವ ವಿಶೇಷಾದ್ವೈತ ಪ್ರತಿಷ್ಠಾಪಕರು ಶ್ರೀಪತಿ ಪಂಡಿತಾರಾಧ್ಯರು. (ಕ್ರಿ. ಶ. ಸು. ೧೧೦೦) ಇವರು ಬ್ರಹ್ಮಸೂತ್ರಗಳಿಗೆ ಭೇದಾಭೇದ ಪರವಾದ ಭಾಷ್ಯವನ್ನು ಬರೆದು ವೀರಶೈವ ಸಿದ್ಧಾಂತವನ್ನು "ವಿಶೇಷಾದ್ವೈತ"ವೆಂದು ಕರೆದರು.

ಹಿಂದೆ ಹೇಳಿದ ದ್ವೈತಶೈವ, ಲಕುಲೀಶಪಾಶುಪತ, ಶ್ರೀಕಂಠ ಶಿವಾಚಾರ್ಯರ ಶೈವ ವಿಶಿಷ್ಟಾದ್ವೈತ ಹಾಗೂ ಶ್ರೀ ರಾಮಾನುಜಾಚಾರ್ಯರ ವೈಷ್ಣವ ವಿಶಿಷ್ಟಾದ್ವೈತಗಳ ಪ್ರಭಾವವು ಶ್ರೀಕರಭಾಷ್ಯದಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ರಾಮಾನುಜರು ತಮ್ಮ ಭಾಷ್ಯವನ್ನು "ಶ್ರೀ ಭಾಷ್ಯ" ಎಂದರೆ ಶ್ರೀಪತಿ ಪಂಡಿತರ ಭಾಷ್ಯವು "ಶ್ರೀಕರಭಾಷ್ಯ" ವೆನಿಸಿತು. ಮೇಲಾಗಿ ಶ್ರೀಭಾಷ್ಯದ ಅನೇಕ ಅವತರಣಗಳು ಶ್ರೀಕರ ಭಾಷ್ಯದಲ್ಲಿ ಸಮಾವೇಶಗೊಂಡಿವೆ.

ಶ್ರೀಪತಿ ಪಂಡಿತಾರಾಧ್ಯರು ತಮ್ಮ ಭಾಷ್ಯದಲ್ಲಿ ಶ್ರೀಕಂಠ ಶಿವಾಚಾರ್ಯರನ್ನು "ಶೈವಾಗ್ರಗಣ್ಯ ಶ್ರೀಕಂಠ ಶಿವಾರಾಧ್ಯ" ಎಂದು ಗೌರವಸೂಚಕ ಶಬ್ದಗಳಿಂದ ಹೆಸರಿಸಿರುವರಾದರೂ ಅವರ ವಿಶಿಷ್ಟಾದ್ವೈತವನ್ನು ಪೂರ್ವಪಕ್ಷದಲ್ಲಿ ಪರಿಗಣಿಸಿ ಖಂಡಿಸಿದ್ದಾರೆ (ಶ್ರೀಕರಭಾಷ್ಯ ಬ್ರಂ. ಸೂ. ೨-೧-೭-೨೩) ಮೇಲಾಗಿ ಶ್ರೀಕಂಠ ಶಿವಾಚಾರ್ಯರು ಮತ್ತು ಅವರನ್ನು ಅನುಸರಿಸಿ ಶ್ರೀ ರಾಮಾನುಜರು ಕಲ್ಪಿಸಿರುವ "ವಿಶಿಷ್ಟಾದ್ವೈತ"ವು ಪೂರ್ವಪಕ್ಷಕ್ಕೂ ಸಹ ಅನರ್ಹವೆಂದು ಅದನ್ನು ನಿರಾಕರಿಸಿರುವ ಅಂಶವು ಈ ಮುಂದಿನ ಉಕ್ತಿಯಲ್ಲಿ ಸ್ಪಷ್ಟವಾಗಿದೆ, "ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯೇತ್ಯಾರಭ್ಯ ಭಗವತಾ ವ್ಯಾಸೇನ ಮತತ್ರಯಸ್ಯೈವ ಭೇದಾಭೇದ ಕ್ರಮೇಣ ವ್ಯಪದೇಶಾತ್ ಜೈಮಿನ್ಯಾದಿನ್ಯೈಡಿಕ್ಯೈರಪಿ ಪೂರ್ವಪಕ್ಷಸ್ಯಾಪ್ಯಯೋಗ್ಯತ್ವೇನ ವಿಶಿಷ್ಟಮತಸ್ಯ ಉಪೇಕ್ಷಣೀಯತ್ವಾತ್........ವಿಶಿಷ್ಟಮತಸ್ಯ ತಾಂತ್ರಿಕತ್ವಂ ದುರ್ವಾರಂ" (ಶ್ರೀಕರಭಾಷ್ಯ ೨.೨-೯-೪೩)

ಶ್ರೀಪತಿ ಪಂಡಿತರು ತಮ್ಮ ಭಾಷ್ಯದ ಸ್ವರೂಪವನ್ನು

ಶ್ರುತ್ಯೇಕದೇಶಪ್ರಾಮಾಣ್ಯಂ ದ್ವೈತಾದ್ವೈತಮತಾದಿಷು ।
ದ್ವೈತಾದ್ವೈತಮತೇ ಶುದ್ಧೇ ವಿಶೇಷಾದ್ವೈತ ಸಂಜ್ಞಕೇ ॥
ವೀರಶೈವೈಕ ಸಿದ್ಧಾಂತೇ ಸರ್ವಶ್ರುತಿಸಮನ್ವಯಃ ॥

ಎಂದು ದೃಢಪಡಿಸಿದ್ದಾರೆ. ವೀರಶೈವ ಶಬ್ದ ನಿರ್ವಚನವನ್ನು ಕುರಿತು ಆಚಾರ್ಯ ರೇಣುಕರು

ವೀಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯಬೋಧಿಕಾ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಃ ಪ್ರಕೀರ್ತಿತಾಃ ॥

(ಸಿ. ಶಿ. ಪ. ೫)

ಶಿವ ಮತ್ತು ಜೀವರ ಐಕ್ಯವನ್ನು ಹೇಳುವ ಶಿವಾದ್ವೈತ ವಿದ್ಯೆಯಲ್ಲಿ ರಮಿಸುವವರೇ ವೀರಶೈವರು ಎಂದು ಹೇಳಿದ್ದಾರೆ.

ಶ್ರೀಪತಿ ಪಂಡಿತರು ತಮ್ಮ ವಾದವು ಭೇದಾಭೇದ ಅಥವಾ ದ್ವೈತಾದ್ವೈತವೆಂದು ಹೇಳಿರುವರಾದರೂ ಅದನ್ನು "ವಿಶೇಷಾದ್ವೈತ" ಎಂದು ಕರೆದು ಹೀಗೆ ನಿರ್ವಚಿಸಿದ್ದಾರೆ.

ವಿಶಬ್ದೇನೋಚ್ಯತೇ ಶಂಭು"ರ್ಹಂಸ ಹಂಸೇತಿ" ಮಂತ್ರತಃ ।
ಶೇಷ ಶಬ್ದೇನ ಶಾರೀರೋ 'ಯಥಾಗ್ನೇ"ರಿತಿ ಮಂತ್ರತಃ ॥
ಅದ್ವೈತೇನ ಭವೇದ್ಯೋಗೋ 'ಯಥಾನದ್ಯ' ಇತಿ ಶ್ರುತೇಃ ॥

"ವಿಶ್ಚ ಶೇಷಶ್ಚ ವಿಶೇಷೌ, ತಯೋರದ್ವೈತಂ ವಿಶೇಷಾದ್ವೈತಮಿತಿ ನಿರುಕ್ತಿಃ. 'ಅದ್ವೈತಪದೇನ ಭ್ರಮರಕೀಟವಜ್ಜೀವಸ್ಯ ಸ್ವಾಭಾವಿಕ ಭೇದನಿವೃತ್ತಿರುಪಪದ್ಯತೇ." "ಹಂಸ ಹಂಸೇತಿ ಯೋ ಬ್ರೂಯಾತ್" (ಬ್ರಹ್ಮಬಿಂದ್ವೋಪನಿಷತ್) ಇತ್ಯಾದಿ ಶ್ರುತಿಷು 'ವಿಶಬ್ದಶ್ಚಕ್ಷುಷಿ ವ್ಯೋಮ್ನಿ ವಾತೇ ಪರಮಾತ್ಮನಿ ಪಕ್ಷಿಣಿ" ಇತಿ ನೈಘಂಟುಕೇಷು ವಿಶಬ್ದಸ್ಯ ಪರಮಾತ್ಮ ವಾಚಕತ್ವೇನ ಸ್ಪಷ್ಟೋಪದೇಶಾತ್, ವಾತ್ಯುತ್ಪಾದಯತೀತಿ ವ್ಯುತ್ಪತ್ತ್ಯಾ ಚ ವಿಶಬ್ದೇನ ಜಗತ್ಕಾರಣತ್ವಂ ಬ್ರಹ್ಮಲಕ್ಷಣಂ ಸೂಚಿತಂ, "ಯಥಾಗ್ನೇಃ ವಿಸ್ಫುಲಿಂಗಾಃ" ಇತಿ ಶ್ರುತಿಷು ಪರಮ ಶಿವಾಂಶತ್ವೇನ ಜೀವಾನಾಂ ವ್ಯಪದೇಶಾತ್, ಶೇಷಶಬ್ದೇನ ಜೀವೋಽಭಿಧೀಯತೇ. ಅದ್ವೈತಪದೇನ 'ಯಥಾನದ್ಯ' ಇತ್ಯಾದಿ ಶ್ರುತಿಸಿದ್ಧ ಸಾಯುಜ್ಯಂ ಜೀವ-ಬ್ರಹ್ಮಣೋರುಪದಿಷ್ಟಂ" (ಬ್ರಂ. ಸೂ. ಶ್ರೀಕರ. ೧. ೩. ೧. ೭)

ಎಂದರೆ 'ವಿಶೇಷಾದ್ವೈತ' ಎಂಬಲ್ಲಿ 'ವಿ' ಎಂದರೆ ಪರಮಾತ್ಮ, 'ಶೇಷ' ಶಿವನ ಅಂಶ ರೂಪ ಜೀವ; 'ಹಂಸ ಹಂಸ' ಮತ್ತು 'ಯಥಾಗ್ನೇಃ' ಎಂಬ ಮಂತ್ರಗಳು ಈ

ಅರ್ಥವನ್ನು ಸಮರ್ಥಿಸುತ್ತವೆ. ಈ ಶಿವ-ಜೀವರಿಗೆ 'ಯಥಾನದ್ಯಃ' ಎಂಬ ಶ್ರುತಿಯಂತೆ ಆಗುವ ಅದ್ವೈತ ಎಂದರೆ ಐಕ್ಯವೇ ಲಿಂಗಾಂಗ ಸಾಮರಸ್ಯಾತ್ಮಕವಾದ ಶಿವಯೋಗ. ಇದನ್ನೇ ಶಿವಾದ್ವೈತ, ಶಕ್ತಿವಿಶಿಷ್ಟಾದ್ವೈತ, ವಿಶಿಷ್ಟಾದ್ವೈತ, ಷಟ್‌ಸ್ಥಲ ಸಿದ್ಧಾಂತ ಮುಂತಾದ ಪದಗಳಿಂದ ಕರೆಯಲಾಗಿದೆ; ಇವೆಲ್ಲ ಪರ್ಯಾಯ ಪದಗಳು. ಇವುಗಳ ವ್ಯುತ್ಪತ್ತಿಯನ್ನು ಹೀಗೆ ಸಂಗ್ರಹಿಸಬಹುದು.

ವಿಶೇಷಾದ್ವೈತಂ-ವಿಶ್ಚ ಶೇಷಶ್ಚ ವಿಶೇಷೌ-ಜೀವೇಶೌ ; ತಯೋರದ್ವೈತಂ ವಿಶೇಷಾದ್ವೈತಂ.

ಶಕ್ತಿವಿಶಿಷ್ಟಾದ್ವೈತಂ-ಶಕ್ತಿಶ್ಚ ಶಕ್ತಿಶ್ಚ ಶಕ್ತೀ, ತಾಭ್ಯಾಂ ವಿಶಿಷ್ಟೌ ಜೀವೇಶೌ, ತಯೋರದ್ವೈತಂ-ಶಕ್ತಿವಿಶಿಷ್ಟಾದ್ವೈತಂ. ಶಕ್ತಿಶ್ಚ ಶಕ್ತಿಶ್ಚ ಶಕ್ತೀ ಎಂಬಲ್ಲಿ ಮೊದಲ ಶಕ್ತಿಪದಕ್ಕೆ ಸ್ಥೂಲ ಚಿತ್-ಅಚಿತ್ ಶಕ್ತಿಗಳು ಎಂದೂ ಎರಡನೆಯಃ ಶಕ್ತಿ ಪದಕ್ಕೆ ಸೂಕ್ಷ್ಮ ಚಿತ್-ಅಚಿತ್ ಶಕ್ತಿಗಳು ಎಂದೂ ಅರ್ಥ. ಅದರಂತೆ ಸ್ಥೂಲ ಚಿತ್ > ಕಿಂಚಿಜ್ಞತ್ವ, ಸ್ಥೂಲ ಅಚಿತ್ > ಕಿಂಚಿತ್‌ಕರ್ತೃತ್ವ, ಸೂಕ್ಷ್ಮಚಿತ್ ಎಂದರೆ ಸರ್ವಜ್ಞತ್ವ, ಸೂಕ್ಷ್ಮಅಚಿತ್ > ಸರ್ವಕರ್ತೃತ್ವ ಎಂದು ಅರ್ಥ. ಈ ಎರಡು ಬಗೆಯ ಶಕ್ತಿಗಳಿಂದ ವಿಶಿಷ್ಟರಾದವರು ಜೀವ-ಶಿವರು. ಈ ಬಗೆಯ ಶಿವ ಮತ್ತು ಜೀವರಿಗೆ ಆಗುವ ಅದ್ವೈತ (ಸಾಮರಸ್ಯ)ವೇ ಶಕ್ತಿವಿಶಿಷ್ಟಾದ್ವೈತ.

ವಿಶಿಷ್ಟಾದ್ವೈತಂ-ವಿಶಿಷ್ಟಂ ಚ ವಿಶಿಷ್ಟಂ ಚ ವಿಶಿಷ್ಟೇ > ಲಿಂಗಾಂಗೇ, ತಯೋರದ್ವೈತಂ = ವಿಶಿಷ್ಟಾದ್ವೈತಂ. ಇಲ್ಲಿಯ ಮೊದಲ ವಿಶಿಷ್ಟಪದಕ್ಕೆ ಚಿಚ್ಛಕ್ತಿ ವಿಶಿಷ್ಟ ಪರಶಿವ, ರುದ್ರಾದಿಸಂಜ್ಞೆಯುಳ್ಳ ಲಿಂಗ ಎಂದು ಅರ್ಥ. ಎರಡನೆಯ ವಿಶಿಷ್ಟಪಧಕ್ಕೆ ಚಿತ್ತಶಕ್ತಿ ವಿಶಿಷ್ಟ ಶಿವಾಂಶರೂಪ 'ಅಂಗ' ಎಂಬ ಹೆಸರುಳ್ಳ ಜೀವ ಎಂದು ಅರ್ಥ. ಇಂತಹ ಲಿಂಗ-ಅಂಗಗಳಿಗೆ ಆಗುವ ಅದ್ವೈತ (ಸಾಮರಸ್ಯ)ವೇ ವಿಶಿಷ್ಟಾದ್ವೈತ.

ಶಿವಾದ್ವೈತಂ-ಶಿವಶ್ಚ ಶಿವಶ್ಚ ಶಿವೌ, ತಯೋರದ್ವೈತಂ ಶಿವಾದ್ವೈತಂ. ಇಲ್ಲಿಯೂ ಸಹ ಮೊದಲ ಶಿವಪದಕ್ಕೆ ಸೂಕ್ಷ್ಮಚಿದಚಿತ್‌ಶಕ್ತಿವಿಶಿಷ್ಟ ಶಿವ ಎಂದು ಅರ್ಥ ; ಎರಡನೆಯ ಶಿವ ಪದಕ್ಕೆ ಸ್ಥೂಲಚಿದಚಿತ್‌ಶಕ್ತಿ ವಿಶಿಷ್ಟವಾದ ಅನಾದ್ಯವಿ ಯಿಂದ ಮರೆಮಾಡ (ಅಭಿಭೂತ)ಲ್ಪಟ್ಟ ಶಿವತ್ವವುಳ್ಳ ಅಥವಾ ಶಿವದೀಕ್ಷೆಯಿಂದ ಮಲವು ಅಳಿದು ಶಿವನಾಗಲಿರುವ ಜೀವ ಎಂದು ಅರ್ಥ.

ಶಿವಯೋಗ-ಶಿವೇ ಯೋಗಃ > ಶಿವಯೋಗಃ ಎಂದರೆ ಸೂಕ್ಷ್ಮಚಿದಚಿತ್ ಶಕ್ತಿವಿಶಿಷ್ಟ ಶಿವನಲ್ಲಿ ಶಿವದೀಕ್ಷೆಯಿಂದ ನಷ್ಟಮಲವುಳ್ಳ ಶುದ್ಧಾತ್ಮನಿಗೆ ಆಗುವ ಯೋಗ> ಅದ್ವೈತವೆಂದು ಅರ್ಥ.

ಶ್ರೀಮನ್ನೀಲಕಂಠ ಶಿವಾಚಾರ್ಯರು (ಕ್ರಿ. ಶ. ೧೪೦೦) ಈ ಸಿದ್ಧಾಂತವನ್ನು ವಿಶಿಷ್ಟಾದ್ವೈತ ಅಥವಾ ಶಕ್ತಿವಿಶಿಷ್ಟಾದ್ವೈತ ಎಂದು ಹೆಸರಿಸಿದ್ದಾರೆ. ಇದು ರಾಮಾನುಜೀಯರು ಹೇಳುವ 'ಜೀವಶರೀರಕಂ ಬ್ರಹ್ಮ' ಎಂಬ ಅರ್ಥದ ವಿಶಿಷ್ಟಾದ್ವೈತವಲ್ಲ. ಇಲ್ಲಿರುವ ವೈಶಿಷ್ಟ್ಯ ಶಕ್ತಿಯದು.

ಈ ಸಿದ್ಧಾಂತದಲ್ಲಿ ಜೀವ-ಬ್ರಹ್ಮರು ಕೇವಲರಲ್ಲ ; ಅವರು ವಿಶಿಷ್ಟರು. 'ಘಟ' ಎಂಬಲ್ಲಿ 'ಘಟತ್ವ'ವು ಹೇಗೆ ವಿಶೇಷಣವೊ, ಅದರಂತೆ ಬ್ರಹ್ಮದ ವಿಶೇಷ ಶಕ್ತಿಯೇ ! ಅಗ್ನಿ ಮತ್ತು ಅಗ್ನಿಕಣಗಳಿಗೆ ದಾಹಕತ್ವರೂಪ ಅಭೇದವಿರುವಂತೆ ಅಗ್ನಿತ್ವ ಮತ್ತು ಕಣತ್ವ ಎಂಬ ಭೇದವೂ ಇದೆ. ಅದರಂತೆ 'ಅಹಿಕುಂಡಲ' ಎಂಬಲ್ಲಿ ಅಹಿ> ಸರ್ಪವು ಹುತ್ತದಲ್ಲಿ ಕುಂಡಲಾಕಾರವಾಗಿಯೂ, ಅದೇ ದಾರಿಯಲ್ಲಿ ಹೋಗುವಾಗ ದಂಡಾಕಾರವಾಗಿಯೂ ಇರುವುದು ಸ್ವಾಭಾವಿಕ. ಹೀಗೆ ಅವಸ್ಥಾವಿಶೇಷದಿಂದ ಸರ್ಪದಲ್ಲಿರುವ 'ಕುಂಡಲತ್ವ' ಮತ್ತು 'ದಂಡತ್ವ'ಗಳು ಭೇದಾಭೇದದಿಂದ ಇರುವಂತೆ ಅಂಶ–ಅಂಶಿರೂಪರಾದ ಜೀವ-ಶಿವರಿಗೆ ಸಾಧಕಾವಸ್ಥೆಯಲ್ಲಿ ಭೇದವೂ, ಸಿದ್ಧಾವಸ್ಥೆಯಲ್ಲಿ ಅಭೇದವೂ ಸ್ವತಃ ಸಿದ್ಧವೇ. ಆಗಿದೆ.

ಬ್ರಹ್ಮವು ಶಕ್ತಿವಿಶಿಷ್ಟ :

ಅದ್ವೈತಿಗಳು ಬ್ರಹ್ಮವು ಕೇವಲ, ಶುದ್ಧ ಎಂದು ಒಪ್ಪಿದ್ದಾರೆ. ಶ್ರುತಿಯಲ್ಲಿರುವ 'ಸಚ್ಚಿದಾನಂದಂ ಬ್ರಹ್ಮ' ಎಂಬ ಪದಕ್ಕೆ ಸತ್ತು-ಚಿತ್ತು-ಆನಂದಸ್ವರೂಪವೇ ಬ್ರಹ್ಮ ಎಂದು ಹೇಳುತ್ತಾರೆ. ಸತ್ > ಇರುವಿಕೆ, ಚಿತ್ > ಬೆಳಗುವಿಕೆ, ಆನಂದ > ಸಂತೋಷಗಳು ಗುಣವಿಶೇಷಗಳಾದುದರಿಂದ ಅವು ಜಡ. ಇಂಥ ಜಡವಾದ ಗುಣಗಳನ್ನೇ ಬ್ರಹ್ಮವೆಂದು ಹೇಳಿದಲ್ಲಿ ಅದು ಎಂದಿಗೂ ಜಗತ್ತಿನ ಸೃಷ್ಟಿ-ಸ್ಥಿತಿ-ಲಯ-ತಿರೋಧಾನ ಮತ್ತು ಅನುಗ್ರಹಗಳೆಂಬ ಪಂಚಕೃತ್ಯಕರ್ತೃವಾಗಲಾರದು. ಆದುದರಿಂದ 'ಸಚ್ಚಿದಾನಂದಂ ಬ್ರಹ್ಮ' ಎಂಬುದಕ್ಕೆ 'ಸಚ್ಚಿದಾನಂದವಿಶಿಷ್ಟ' ಎಂದು ಅರ್ಥವಿಸಬೇಕು. 'ಅರ್ಶಆದಿಭ್ಯೋಽಚ್' ಎಂಬ ವ್ಯಾಕರಣ ನಿಯಮದಂತೆ 'ಆಯಾ ಗುಣ

ವುಳ್ಳದ್ದು' ಎಂಬ ಅರ್ಥದಲ್ಲಿ ಅಚ್‌ಪ್ರತ್ಯಯವು ಬಂದು 'ಸಚ್ಚಿದಾನಂದಂ' ಆಗಿದೆ. ಇದಕ್ಕೆ ಸದ್ವಿಶಿಷ್ಟ ಚಿದ್ವಿಶಿಷ್ಟ ಮತ್ತು ಆನಂದವಿಶಿಷ್ಟ ಎಂದಾಗಿ ಆ ಬ್ರಹ್ಮವು ಸತ್ತು-ಚಿತ್ತು-ಆನಂದವುಳ್ಳ ಚೇತನ ಎಂದಾಗುತ್ತದೆ. ಇದರಿಂದ 'ಅಸ್ಮಿ, ಪ್ರಕಾಶೇ, ನಂದಾಮಿ' ಎಂದರೆ 'ನಾನು ಇದ್ದೇನೆ' 'ಬೆಳಗುತ್ತಿದ್ದೇನೆ' ಮತ್ತು 'ಆನಂದ ಪಡುತ್ತಿದ್ದೇನೆ' ಎಂಬ 'ಅನುಭವ'ವೂ ಆ ಬ್ರಹ್ಮಕ್ಕಿದೆ ಎಂದು ಸಿದ್ಧವಾಯಿತು. ಈ ಬಗೆಯ ಅನುಭವವನ್ನೇ ದರ್ಶನದಲ್ಲಿ 'ವಿಮರ್ಶಾಶಕ್ತಿ'ಎಂದು ಕರೆದಿದೆ.

ವಿಮರ್ಶಾಖ್ಯಾ ಪರಾ ಶಕ್ತಿರ್ವಿಶ್ವವೈಚಿತ್ರ್ಯಕಾರಿಣೀ ।
ಯಸ್ಮಿನ್ ಪ್ರತಿಷ್ಠಿತಂ ಬ್ರಹ್ಮ ತದಿದಂ ವಿಶ್ವಭಾಜನಮ್ ॥೩೧॥
ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತು ಪ್ರಕಾಶಿನೀ ।
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿರಾ ॥೩೨॥
(—ಸಿ. ಶಿ. ಪ. ೨೦)

ಬ್ರಹ್ಮವು ಶಕ್ತಿವಿಶಿಷ್ಟ ಎಂಬ ಅಂಶವನ್ನು 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ' (ಶ್ವೇ. ೬—೮) 'ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ' (ಶ್ವೇ. ೧. ೩) ಮುಂತಾದ ಶ್ರುತಿಗಳು ಸಮರ್ಥಿಸುತ್ತವೆ. ಅದ್ವೈತಿಗಳು ಹೇಳುವ 'ಮಾಯಾ' ಪದವು 'ಯಾ ಮಾ ಸಾ ಮಾಯಾ' (ಮಿಥ್ಯೆ) ಎಂಬ ಅರ್ಥದಲ್ಲಿದೆ. ಆದರೆ ಶಿವಾದ್ವೈತದಲ್ಲಿನ ಮಾಯೆ ಶಿವಗತ ವಿಮರ್ಶಾಶಕ್ತಿಯೇ.

ಮಂ ಶಿವಂ ಪರಮಂ ಬ್ರಹ್ಮ ಪ್ರಾಪ್ನೋತೀತಿ ಸ್ವಭಾವತಃ ।
ಮಾಯೇತಿ ಪ್ರೋಚ್ಯತೇ ಲೋಕೇ ಬ್ರಹ್ಮನಿಷ್ಠಾ ಸನಾತನೀ ॥

ಎಂಬ ಉಕ್ತಿ ಇದನ್ನು ಸಮರ್ಥಿಸುತ್ತದೆ.

### ಜೀವಸ್ವರೂಪ

ಜೀವನು ಶಿವನ ಅಂಶ ; ಮತ್ತು ಜೀವರು ಅನಂತ ಎಂಬುದನ್ನು ಶ್ರುತಿ ಪ್ರತಿಪಾದಿಸಿದೆ. 'ಉಜ್ವಲವಾಗಿ ಉರಿಯುವ ಬೆಂಕಿಯಿಂದ ಸರೂಪವಾದ ಸಾವಿರಾರು ಕಿಡಿಗಳು ಉದಿಸುವಂತೆ ಆ ಅಕ್ಷರ ಪರಬ್ರಹ್ಮದಿಂದ ವಿವಿಧ ವಾಸನಾ ವಿಶೇಷ

ವುಳ್ಳ ಜೀವಿಗಳು ಅಭಿವ್ಯಕ್ತವಾಗುತ್ತಾರೆ'[1] 'ಮಮೈವಾಂಶೋ ಜೀವ ಲೋಕೇ ಜೀವ ಭೂತಸ್ಸನಾತನಃ (ಭ. ಗೀ.) 'ಅನಾದ್ಯವಿದ್ಯಾಸಂಬಂಧಾತ್ತದಂಶೋ ಜೀವ ನಾಮಕಃ (ಸಿ ಶಿ. ೫-೩೪) 'ಅಂಶೋ ನಾನಾ ವ್ಯಪದೇಶಾತ್' (ಬ್ರಂ.ಸೂ. ೨. ೩. ೪೦) ಎಂಬ ಶ್ರುತಿ ಸೂತ್ರಗಳು ಈ ವಿಷಯವನ್ನು ಸಮರ್ಥಿಸಿವೆ.

## ಜಗತ್ಸೃಷ್ಟಿ, ಪರಿಣಾಮ ವಾದ

ಜಗತ್ತು ಶಕ್ತಿವಿಶಿಷ್ಟ ಬ್ರಹ್ಮದ ಪರಿಣಾಮ. ಸುವರ್ಣವು ಆಭರಣಗಳಾಗಿ ಪರಿಣಾಮ ಹೊಂದುವಂತೆ ಬ್ರಹ್ಮವೇ ಜಗತ್ತಾಗಿ ಪರಿಣಮಿಸಿತು. ಆತ್ಮಶಕ್ತಿಯ ವಿಕಾಸದಿಂದ ಶಿವನೇ ಜಗನ್ಮಯನಾದ. ಸಂಕುಚಿತವಾಗಿ ಮಡಿಸಿದ್ದ ವಸ್ತ್ರವನ್ನು ಬಿಚ್ಚಿ ಹರಡಿದಾಗ ಅದೇ ಕುಟಿ (ಡೇರೆ)ಯಾಗುವಂತೆ.[2] ಮರವು ಕೊಂಬು ರೆಂಬೆ ಎಲೆ ಹೂವಾಗಿ ಪರಿಣಮಿಸಿರುವಂತೆ ಶಿವನೇ ಭೂಮಿ ಗಗನಾದಿರೂಪ ಪಂಚಭೂತ ಪ್ರಪಂಚವಾಗಿ ಪರಿಣಾಮ ಹೊಂದಿದ್ದಾನೆ. ಆಲದ ಬೀಜದಲ್ಲಿ ಮುಂದೆ ಮೊಳೆತು ಮರವಾಗಲಿರುವ ಆಲದ ಮರ ಸೂಕ್ಷ್ಮವಾಗಿರುವಂತೆ ಶಿವನಲ್ಲಿ ವಿಶ್ವವು ಬೀಜರೂಪ ವಾಗಿ ಅಡಗಿತ್ತು.

'ಪರಶಿವನ ಶಕ್ತಿವಿಸ್ತಾರವೇ ವಿಶ್ವ'[3] 'ಲೋಕದಲ್ಲಿ ಶಕ್ತಿ ಮತ್ತು ಶಕ್ತಿಮಾನ್ ಎಂಬ ಎರಡೇ ಪದಾರ್ಥಗಳಿವೆ. ಶಕ್ತಿಯ ವಿಕಾಸವೇ ಜಗತ್ತು. ಶಿವನು ಶಕ್ತಿವಿಶಿಷ್ಟ'[4] 'ನಾನೇ ನಾನಾವಿಧ ಪ್ರಪಂಚವಾಗಿ ಪರಿಣಮಿಸುವೆನು.'[5] 'ಜೇಡರ ಹುಳು ತನ್ನ

---

[1] ಯಥಾ ಸುದೀಪ್ತಾತ್ ಪಾವಕಾತ್ ವಿಸ್ಫುಲಿಂಗಾಃ ಸಹಸ್ರಶಃ ಪ್ರಭವಂತೇ ಸರೂಪಾಸ್ತಥಾಕ್ಷರಾದ್ವಿವಿಧಾಃ ಸೋಮ್ಯ ಭಾವಾಃ ಪ್ರಜಾಯಂತೇ ತತ್ರಚೈವಾಪಿ ಯಂತಿ ॥
(—ಮುಂಡಕ. ೨. ೧. ೧.)

[2] ಆತ್ಮಶಕ್ತಿ ವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ ।
ಕುಟೀಭಾವಾದ್ಯಥಾ ಭಾತಿ ಪಟಃ ಸ್ವಸ್ಯಪ್ರಸಾರಣಾತ್ ॥ (ಸಿ. ಶಿ. ೧೦.೬೫)

[3] ಸ್ವಶಕ್ತಿ ಪ್ರಚಯೋಽಸ್ಯ ವಿಶ್ವಂ (ಶಿವಸೂತ್ರ ೨-೩೦)

[4] ಶಕ್ತಿಶ್ಚ ಶಕ್ತಿಮಾಂಶ್ಚೈವ ಪದಾರ್ಥದ್ವಯಮುಚ್ಯತೇ ।
ಶಕ್ತಯೋಽಸ್ಯ ಜಗತ್ಕೃತ್ಸ್ನಂ ಶಕ್ತಿಮಾಂಸ್ತು ಮಹೇಶ್ವರಃ ॥
(ಸರ್ವಮಂಗಲಾ)

[5] ಬಹು ಸ್ಯಾಂ ಪ್ರಜಾಯೇಯ (ಛಾಂ. ೬. ೨. ೩.)

ಎಂಜಲಿನಿಂದಲೇ ಬಲೆ ಹೆಣೆಯುವಂತೆ ಶಿವ ತನ್ನ ಶಕ್ತ್ಯಂಶದಿಂದ ವಿಶ್ವನಿರ್ಮಾಣ ಮಾಡಿದನು'[1] ಮುಂತಾದ ಉಕ್ತಿಗಳು ಜಗತ್ತು ಶಿವನ ಪರಿಣಾಮ ಎಂಬುದನ್ನು ಸಮರ್ಥಿಸುತ್ತವೆ. ಒಟ್ಟಿನಲ್ಲಿ ಶಕ್ತಿವಿಶಿಷ್ಟ ಶಿವನು ಜಗತ್ತಿಗೆ ಕಾರಣ ಎಂಬಲ್ಲಿ ಅವನು ತನ್ನ ಶಕ್ತ್ಯಂಶದಿಂದ ಉಪಾದಾನಕಾರಣನೂ, ಚೈತನ್ಯಾಂಶದಿಂದ ನಿಮಿತ್ತ ಕಾರಣನೂ ಆಗಿರುವುದರಿಂದ ಶಿವನು ಜಗತ್ತಿಗೆ 'ಅಭಿನ್ನ ನಿಮಿತ್ತೋಪಾದಾನಕಾರಣ' ವೆನಿಸಿದ್ದಾನೆ.

### ಜಗತ್ತು ಸತ್ಯ

ಅದ್ವೈತಿಗಳು ಬ್ರಹ್ಮವೊಂದೇ ಸತ್ಯ. ಜೀವ ಜಗತ್ತುಗಳು ಮಿಥ್ಯ ಎನ್ನುತ್ತಾರೆ. ಆದರೆ ಶಿವಾದ್ವೈತದಲ್ಲಿ ಜೀವ-ಜಗತ್ತುಗಳು ಶಿವನ ಪರಿಣಾಮವಾದ್ದರಿಂದ ಅವು ಸತ್ಯ. ಶ್ರುತಿಯು 'ಪರಬ್ರಹ್ಮವು ಜಗತ್ತನ್ನು ಸೃಜಿಸಿ ಅದರಲ್ಲಿ ತಾನೇ ಪ್ರವೇಶಿಸಿತು'[2] ಎಂದು ಹೇಳಿರುವುದರಿಂದ ಜಗತ್ತು ಸತ್ಯ. ಜಗದ್ಗುರು ರೇಣುಕರು

> ಶಿವತತ್ತ್ವಾತ್ ಸಮುತ್ಪನ್ನಂ ಜಗದಸ್ಮಾನ್ನ ಭಿದ್ಯತೇ ।
> ಫೇನೋರ್ಮಿಬುದ್ಬುದಾಕಾರೊ ಯಥಾ ಸಿಂಧೋರ್ನ ಭಿದ್ಯತೇ ॥
> (ಸಿ.ಶಿ.ಪ. ೧೦)

ಎಂದು ಹೇಳಿ ಮಣ್ಣಿನಿಂದಾದ ಗಡಿಗೆ ಹೇಗೆ ಮಣ್ಣಿಗಿಂತ ಬೇರೆಯಲ್ಲವೋ, ಸಮುದ್ರದ ನೊರೆ ತೆರೆ ಬುದ್ಬುದಾದಿಗಳು ಹೇಗೆ ಕಡಲಿಗಿಂತ ಬೇರೆ ಅಲ್ಲವೋ ಅದರಂತೆ ಶಿವತತ್ತ್ವದಿಂದ ಉದಿಸಿದ ಜಗತ್ತು ಶಿವನಿಗಿಂತ ಬೇರೆ ಅಲ್ಲ ಎಂದಿದ್ದಾರೆ.

### ಶಕ್ತಿ-ಭಕ್ತಿಗಳ ಸ್ವರೂಪ

ಶಿವನು ತನ್ನ ಲೀಲೆಗಾಗಿ ಜಗತ್ತನ್ನು ಸೃಜಿಸಿದ. 'ಸ ಏಕಾಕೀ ನ ರಮತೇ, ಸ ದ್ವಿತೀಯಮೈಚ್ಛತ್' 'ಸಚ್ಚ ಅಸಚ್ಚಾಭವತ್' ಮುಂತಾದ ಶ್ರುತಿಗಳಲ್ಲಿ ಈ ಅರ್ಥವನ್ನು ಸಮರ್ಥಿಸಲಾಗಿದೆ. ಆಗಮಗಳಲ್ಲಿ ಜಗತ್ತಿಗೆ ಕಾರಣವಾದ ಪರಬ್ರಹ್ಮವು 'ಸ್ಥಲ' ಎಂದು ಕರೆಯಲ್ಪಟ್ಟಿದೆ. ಈ ಚರಾಚರಾತ್ಮಕವಾದ ವಿಶ್ವವು ಯಾವು

---

1 ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ (ಮುಂಡಕ ೧-೧-೭)

2 ತತ್ಸೃಷ್ಟ್ವಾ ತದೇವಾನುಪ್ರಾವಿಶತ್ (ತೈ. ಅ. ೬)

ದರಿಂದ ಹೊರಹೊಮ್ಮಿ ಮತ್ತೆ ಎಲ್ಲಿ ಅಡಗುವುದೋ ಅದೇ ಸ್ಥಲತತ್ತ್ವ ಎಂದು ಹೇಳಿದೆ.[1] ಪ್ರಳಯದಲ್ಲಿ 'ಸ್ವಸ್ಥ'ವಾಗಿದ್ದ ಬ್ರಹ್ಮಕ್ಕೆ ಜಗತ್ತನ್ನು ಸೃಜಿಸಬೇಕೆನಿಸಿದಾಗ ಅದು 'ಕ್ಷೋಭ'ಗೊಂಡಿತು ಎಂದರೆ ಅವನ ಪ್ರಜ್ಞಾ ಶಕ್ತಿ ಸ್ಫುರಿಸಿತು. ಆಗ ಸ್ಥಲತತ್ತ್ವವು ಎರಡು ಭಾಗವಾಯಿತು. ಒಂದು ಲಿಂಗಸ್ಥಲ, ಮತ್ತೊಂದು ಅಂಗಸ್ಥಲ.[2] ಚರಾಚರ ವಿಶ್ವವೆಲ್ಲವೂ ಪ್ರಳಯದಲ್ಲಿ ಎಲ್ಲಿ ಅಡಗಿ ಮತ್ತೆ ಸೃಷ್ಟಿಯಲ್ಲಿ ಯಾವುದರಿಂದ ಹೊರಹೊಮ್ಮುವುದೊ ಅದೇ ಲಿಂಗಸ್ಥಲ.[3] ಅಂ ಎಂದರೆ ಪರಬ್ರಹ್ಮ. ಅದರ ಕಡೆ ಅಭಿಮುಖವಾದ ಜೀವತತ್ತ್ವವೇ ಅಂಗಸ್ಥಲ.[4]

ಹೀಗೆ ಸ್ಥಲಶಬ್ದ ವಾಚ್ಯವಾದ ಶಕ್ತಿವಿಶಿಷ್ಟ ಪರಬ್ರಹ್ಮವು ಲಿಂಗ ಮತ್ತು ಅಂಗ ಎಂದು ವಿಭಕ್ತವಾದಾಗ ಅಲ್ಲಿರುವ ಶಕ್ತಿಯೂ ಇರ್ತೆರನಾಯಿತು, ಲಿಂಗಸ್ಥಲವನ್ನು ಆಶ್ರಯಿಸಿದ ಶಕ್ತಿ 'ಕಲೆ' ಎಂಬ ಹೆಸರು ತಳೆಯಿತು. ಅದರಂತೆ ಅಂಗಸ್ಥಲವನ್ನು ಆಶ್ರಯಿಸಿದ ಶಕ್ತಿ ಆ ಜೀವಿಯ ಉದ್ಧಾರಕ್ಕಾಗಿ 'ಭಕ್ತಿ'ಯೆನಿಸಿತು. ಜಗನ್ನಿರ್ಮಾಣ ಕಾಲ (ಪ್ರವೃತ್ತಿ) ದಲ್ಲಿ ಶಿವನಿಗೆ ನೆರವಾದ ಮಾಹೇಶ್ವರೀ ಶಕ್ತಿಯೇ ನಿವೃತ್ತಿ ಮಾರ್ಗದಲ್ಲಿ ಆ ಜೀವಿಯನ್ನು ಮೇಲೆತ್ತಲು ಮಾತೃಸ್ವರೂಪಿಣಿಯಾಗಿ ಭಕ್ತಿಯೆನಿಸಿತು. ಮಹಾ ಕಾಲಾನಲಜ್ವಾಲೆಯು ಮನೆ ಬೆಳಗುವ ದೀಪವಾದಂತೆ.

ಜ್ವಾಲೆ ತಮಸ್ವಿನಿ-ಭಕ್ತಿ ಸುಪ್ರಕಾಶಿನಿ; ಶಕ್ತಿ ಸವಾಸನಾ-ಭಕ್ತಿ ನಿರ್ವಾಸನಾ ಮಹತ್ತರ ಮತ್ತು ಶುದ್ಧ; ಯದ್ಯಪಿ ಶಕ್ತಿಯೇ ಭಕ್ತಿ; ಭಕ್ತಿಯೇ ಶಕ್ತಿ; ಅವೆರಡಕ್ಕೂ ಅಷ್ಟು ವ್ಯತ್ಯಾಸವಿಲ್ಲ. ಆದರೂ ವಿಚಾರಮಾಡಿದರೆ ಇವೆರಡಕ್ಕೂ ಮಹದಂತರವುಂಟು.

---

1 ಸ್ಥೀಯತೇ ಲೀಯತೇ ಯತ್ರ ಜಗದೇತಚ್ಚರಾಚರಂ ।
ತದ್ಬ್ರಹ್ಮಸ್ಥಲಮಿತ್ಯಾಹುಃ ಸ್ಥಲತತ್ತ್ವವಿಶಾರದಾಃ ॥ (ಅನು. ಸೂ. ೨.೧)

2 ಸ್ವಶಕ್ತಿಕ್ಷೋಭಮಾತ್ರೇಣ ಸ್ಥಲಂ ತದ್ದ್ವಿಧಂ ಭವೇತ್ ।
ಏಕಂ ಲಿಂಗಸ್ಥಲಂ ಪ್ರೋಕ್ತಮನ್ಯದಂಗಸ್ಥಲಂ ಸ್ಮೃತಂ ॥ (ಅನು. ೨. ೦)

3 ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ ।
ತದೇತಲ್ಲಿಂಗಮಿತ್ಯುಕ್ತಂ ಲಿಂಗತತ್ತ್ವಪರಾಯಣೈಃ ॥ (ಅನು. ಸೂ. ೩.೨)

4 ಅಂಭವೇತ್ ಪರಮಂ ಬ್ರಹ್ಮ ತತ್ಪರಂ ತತ್ಪರಾಯಣಂ ।
ಅಂಗಸ್ಥಲಮಿತಿ ಪ್ರಾಹುರಂಗತತ್ತ್ವವಿಶಾರದಾಃ ॥ (ಅನು. ಸೂತ್ರ. ೪-೩)

**ಶಕ್ತಿ-ಭಕ್ತಿ**

| | | |
|---|---|---|
| ೧. ಶಕ್ತಿಯಿಂದ ಪ್ರಪಂಚಸೃಷ್ಟಿ. | — | ಭಕ್ತಿಯಿಂದ ಪ್ರಪಂಚ ಲಯ. |
| ೨. ಶಕ್ತಿವೈಚಿತ್ರ್ಯದಿಂದ ನಿರೂಪವೂ ರೂಪವಾಗುತ್ತದೆ. | — | ಭಕ್ತಿವೈಚಿತ್ರ್ಯದಿಂದ ರೂಪವೂ ನಿರೂಪವಾಗುತ್ತದೆ. |
| ೩. ಪ್ರಪಂಚವನ್ನು ಬೆಳೆಸುವ ಬಯಕೆ ಶಕ್ತಿಗೆ | — | ಭಕ್ತಿಗೆ ಪ್ರಪಂಚವನ್ನು ಮುಗಿಸುವ ಅಪೇಕ್ಷೆ |
| ೪. ಶಕ್ತಿ ಅಧೋಮುಖಿ | — | ಭಕ್ತಿ ಊರ್ಧ್ವಮುಖಿ |
| ೫. ಶಕ್ತಿ ಸಮಾಯಾ | — | ಭಕ್ತಿ ನಿರ್ಮಾಯಾ |
| ೬. ಉಪಾಸ್ಯತ್ವ ಶಕ್ತಿಯದು | — | ಭಕ್ತಿಯದು ಉಪಾಸಕತ್ವ |
| ೭. ಶಕ್ತಿ ಲಿಂಗಸ್ಥಲವನ್ನು ಆಶ್ರಯಿಸಿದೆ | — | ಭಕ್ತಿ ಅಂಗಸ್ಥಲವನ್ನು ಆಶ್ರಯಿಸಿದೆ. |

ಯಾವ ದೃಷ್ಟಿಯಿಂದ ನೋಡಿದರೂ ಶಕ್ತಿಗಿಂತ ಭಕ್ತಿಯೇ ಮಿಗಿಲು.[1]

**ಪ್ರವೃತ್ತಿಮಾರ್ಗ-ಮುವತ್ತಾರು ತತ್ತ್ವಗಳು**

ಸಚ್ಚಿದಾನಂದ ರೂಪವಾದ ಪರಶಿವಬ್ರಹ್ಮದಲ್ಲಿನ ವಿಮರ್ಶಾಶಕ್ತಿಯ ಪರಿಣಾಮವೇ ಜಗತ್ತು ಎಂದು ಹೇಳಲಾಯಿತು. ಶಿವಶಕ್ತಿಯು ಜಗತ್ಸೃಷ್ಟಿಯಲ್ಲಿ ಪ್ರವೃತ್ತವಾದಾಗ ಅದು ಕ್ರಮವಾಗಿ ಮುವತ್ತಾರು ತತ್ತ್ವಗಳಾಗಿ ಪರಿಣಮಿಸುತ್ತದೆ.

**ಶುದ್ಧ ತತ್ತ್ವಗಳು ೫**

ಶಿವ-ಶಕ್ತಿ-ಸದಾಶಿವ-ಈಶ್ವರ-ಶುದ್ಧವಿದ್ಯಾ.

**ಮಿಶ್ರತತ್ತ್ವಗಳು ೭**

ಮಾಯಾ-ಕಾಲ-ನಿಯತಿ-ಕಲಾ-ವಿದ್ಯಾ-ರಾಗ-ಪುರುಷ.

---

[1] ಅಪಿ ತರ್ಕಪ್ರಮಾಣಾಭ್ಯಾಂ ಶಕ್ತೇರ್ಭಕ್ತಿರ್ಗರೀಯಸೀ (ಅ. ಸೂ. ೨.೩೦)

**ಅಶುದ್ಧ ತತ್ತ್ವಗಳು ೨೪**

ಪ್ರಕೃತಿ (ಸತ್ತ್ವ-ರಜಸ್ಸು-ತಮಸ್ಸುಗಳ ಸಮಸ್ಥಿತಿ)
ಚಿತ್ತ-ಬುದ್ಧಿ-ಅಹಂಕಾರ-ಮನಸ್ಸು (ಅಂತಃಕರಣ ಚತುಷ್ಟಯ)
ಶ್ರೋತ್ರ-ತ್ವಕ್-ನೇತ್ರ-ಜಿಹ್ವಾ-ಘ್ರಾಣ (ಜ್ಞಾನೇಂದ್ರಿಯ ಪಂಚಕ)
ವಾಕ್-ಪಾಣಿ-ಪಾದ-ಪಾಯು-ಉಪಸ್ಥ (ಕರ್ಮೇಂದ್ರಿಯ ಪಂಚಕ)
ಶಬ್ದ-ಸ್ಪರ್ಶ-ರೂಪ-ರಸ-ಗಂಧ (ತನ್ಮಾತ್ರಾ ಪಂಚಕ)
ಆಕಾಶ-ವಾಯು-ವಹ್ನಿ-ಜಲ-ನೆಲ (ಭೂತ ಪಂಚಕ)

ಎಂಬ ಮುಪತ್ತಾರು ತತ್ತ್ವಗಳಾಗಿ ಪರಿಣಮಿಸಿ ಜಗತ್ತು ನಿರ್ಮಾಣವಾಯಿತು. ತತ್ತ್ವಗಳು ಮುವತ್ತಾರು ಎಂಬುದಕ್ಕೆ ಶ್ರುತಿ ಸಮ್ಮತಿಯುಂಟು.[1]

ಹೀಗೆ ಶಕ್ತಿವಿಶಿಷ್ಟ ಪರಶಿವಬ್ರಹ್ಮವು 'ಬಹುಸ್ಯಾಂ ಪ್ರಜಾಯೇಯ' ಎಂಬ ಉಕ್ತಿಯಂತೆ ಸೃಷ್ಟಿಗೆ ಉನ್ಮುಖವಾದಾಗ ಬ್ರಹ್ಮನಿಷ್ಠ ಇಚ್ಛಾಶಕ್ತಿಯೇ ಜಗದ್ರೂಪವಾಗಿ ಪರಿಣಮಿಸಿ ಹದಿನಾಲ್ಕು ಲೋಕಗಳ ಸೃಷ್ಟಿಯಾಯಿತು.[2]

**ನಿವೃತ್ತಿಮಾರ್ಗ**

ಜಗತ್‌ಪ್ರವೃತ್ತಿಯಲ್ಲಿ ಶಿವನಿಗೆ ನೆರವಾದ ಶಕ್ತಿಯೇ ಜಗತ್ತಿನ ನಿವೃತ್ತಿಯಲ್ಲಿ ಜೀವನನ್ನು ಉದ್ಧರಿಸುವುದಕ್ಕಾಗಿ ಭಕ್ತಿಯಾಗಿ ಪರಿಣಮಿಸಿ ಜೀವ (ಅಂಗ) ನನ್ನು ಆಶ್ರಯಿಸುತ್ತದೆ ಎಂದು ಹೇಳಲಾಯಿತು. ಹೀಗೆ ಭಕ್ತಿ ಅವನನ್ನು ಹೊಂದಬೇಕಾದರೆ ಅವನಲ್ಲಿ ಪಾಪವು ಅಳಿದು ಪುಣ್ಯವು ಮಿಗಿಲಾಗಿರಬೇಕು. ಅನೇಕ ಜನ್ಮಗಳಲ್ಲಿ ಮಾಡಿದ ಸತ್ಕರ್ಮಗಳ ಫಲವಾಗಿ ಪಾಪವು ಅಳಿದು ಶುದ್ಧಾಂತಃ

---

1 ಪುನಸ್ತಂ ಹೋವಾಚ, ಕಾನಿ ಷಟ್ ತ್ರಿಂಶತ್ ತತ್ತ್ವಾನೀತಿ, ಸ ಆತ್ಮಾ ಆಹ. ಶಿವ ಶಕ್ತಿ ಸದಾಶಿವೇಶ್ವರ ಶುದ್ಧವಿದ್ಯಾ ಏತಾನಿ ಶುದ್ಧಾನಿ ಪಂಚ ತತ್ತ್ವಾನಿ, ಮಾಯಾ ಕಾಲೋ ನಿಯತಿಃ ಕಲಾ ವಿದ್ಯಾ ರಾಗಃ ಪುರುಷ ಇತಿ ಶುದ್ಧಾಶುದ್ಧಾನಿ ಸಪ್ತತತ್ತ್ವಾನಿ...
(ವೃದ್ಧ ಜಾಬಾಲೋಪನಿಷತ್)

2 ಅನಾದಿ ನಿಧನಾತ್ ಶಾಂತಾತ್ ಶಿವಾತ್ ಪರಮಕಾರಣಾತ್ ।
ಇಚ್ಛಾಶಕ್ತಿರ್ವಿನಿಷ್ಕ್ರಾಂತಾ ತತೋ ಜ್ಞಾನಂ ತತಃ ಕ್ರಿಯಾ ॥
ತತ್ರೋತ್ಪನ್ನಾನಿ ಭೂತಾನಿ ಭುವನಾನಿ ಚತುರ್ದಶ ॥ (ಶಿವಾಗಮ)

ಕರಣನಾದ ಜೀವಿಯು 'ಪಿಂಡ'ನೆನಿಸುತ್ತಾನೆ. ಆಗ ಅವನ ಮೇಲೆ ಶಿವನ ಕೃಪೆ ಬೀಳುತ್ತದೆ. ಇದಕ್ಕೆ ಶಾಸ್ತ್ರದಲ್ಲಿ 'ಶಕ್ತಿಪಾತ'ವೆಂದು ಹೆಸರು. ಹಾಗಾದಾಗ ಜೀವಿಯಲ್ಲಿ ಕೆಲವು ಬದಲಾವಣೆಗಳು ಕಾಣುತ್ತವೆ. ಶಿವನಲ್ಲಿ ಶಿವಭಕ್ತರಲ್ಲಿ, ಶಿವ ಶಾಸ್ತ್ರಗಳಲ್ಲಿ ಆಸಕ್ತಿ, ಶ್ರದ್ಧೆ, ಭವದಲ್ಲಿ ನಿರಾಸಕ್ತಿ, ವಿಷಯಗಳಲ್ಲಿ ಅನಾಸಕ್ತಿ ಲಕ್ಷಣ ಗಳು ಕಾಣುತ್ತವೆ. ಅವಿಚ್ಛಿನ್ನವಾದ ಈ ಲಕ್ಷಣಗಳನ್ನು ಗುರ್ತಿಸಿ ಗುರು ಅವನಿಗೆ ಶಿವದೀಕ್ಷೆ ಎಸಗುತ್ತಾನೆ [1]

ಅನಾದಿಕರ್ಮ ವಶದಿಂದ ಜೀವನಲ್ಲಿ ಆಣವ, ಮಾಯೀಯ ಮತ್ತು ಕಾರ್ಮ ಎಂಬ ಮಲಗಳು ಸ್ವಾಭಾವಿಕವಾಗಿ ಇರುತ್ತವೆ ; ತಾಮ್ರದಲ್ಲಿ ಕಿಲುಬು ಇರುವಂತೆ. ರಸವೇಧವಾದಾಗ ತಾಮ್ರದಲ್ಲಿ ಸ್ವಾಭಾವಿಕವಾಗಿಯೇ ಇದ್ದ ಕಿಲುಬು ನಾಶವಾಗಿ ಅದು ಸುವರ್ಣವಾಗುತ್ತದೆ. ಅಲ್ಲಿಂದ ಮುಂದೆ ಅದರಲ್ಲಿ ಕಿಲುಬಿಗೆ ಅವಕಾಶವಿಲ್ಲ. ಅದರಂತೆ ಜೀವಿಯಲ್ಲಿ ಆಣವಾದಿ ಮಲಗಳು ಸ್ವಾಭಾವಿಕವಾದರೂ ಅವು ಜೀವನು ಸದ್ಗುರುವಿನ ಕೃಪೆಗೆ ಪಾತ್ರನಾಗಿ ಶಿವದೀಕ್ಷೆ ಪಡೆದಮೇಲೆ ನಾಶವಾಗುವವು. ಆಗ ಅವನು ಭಕ್ತನೆನಿಸುತ್ತಾನೆ.

## ಮಲಗಳ ಸ್ವರೂಪ

ಜೀವನು ಶಿವನ ಅಂಶ ಎಂದು ಹೇಳಲಾಯಿತು. ಅಂದಮೇಲೆ ಶಿವನಲ್ಲಿ ಪರಿಪೂರ್ಣತ್ವ, ಸರ್ವಜ್ಞತ್ವ ಮತ್ತು ಸರ್ವಕರ್ತೃತ್ವ ಎಂಬ ಗುಣಗಳಿದ್ದವು. ಮೂಲತಃ ಜೀವನು ಶಿವನೇ ; ಆದರೂ ಅವನು ಅನಾದಿ ಕರ್ಮವಶದಿಂದ ಬೆಂಕಿ ಯಿಂದ ಕಿಡಿ ಸಿಡಿದಂತೆ ಶಿವಾಂಶವಾಗಿ ಶಿವನಿಂದ ಬೇರ್ಪಟ್ಟನು. ಆಗ ಶಿವನಲ್ಲಿದ್ದ ಪರಿಪೂರ್ಣತ್ವ ಮರೆತು 'ತಾನು ಅಪೂರ್ಣ' ಎಂಬ ಭಾವ ಜೀವಿಗೆ ಉದಿಸಿತು. ಇದೇ

---

1 ಯೇಷಾಂ ಶರೀರಿಣಾಂ ಶಕ್ತಿಃ ಪತತ್ಯೇವ ನಿವೃತ್ತಯೇ ।
ತೇಷಾಂ ತಲ್ಲಿಂಗಮೌತ್ಸುಕ್ಯಂ ಮುಕ್ತೌ, ದ್ವೇಷೋ ಭವಸ್ಥಿತೌ ॥
ಭಕ್ತಿಶ್ಚ ಶಿವಭಕ್ತೇಷು ಶ್ರದ್ಧಾ ತಚ್ಛಾಸಕೇ ಶಿವೇ ।
ಏಭಿರ್ಲಕ್ಷ್ಯೈರವಿಚ್ಛಿನ್ನೈಃ ಶಕ್ತಿಪಾತೋ ಮಹಾತ್ಮಭಿಃ ॥
ಅನುಮೇಯಃ ಸದೀಕ್ಷೈಶ್ಚ ಶಕ್ತಿಪಾತಾನುಸಾರತಃ ।
ಶಕ್ತಿಪಾತಂ ಸಮಾಲೋಕ್ಯ ದೀಕ್ಷಯಾ ಯೋಜಯೇದಮುಂ ॥
(ಪಾರಮೇಶ್ವರ–ಮೃಗೇಂದ್ರಾಗಮಗಳು)

ಆಣವಮಲ. ತಾನು ಮೊದಲು ಸರ್ವಜ್ಞನಾದರೂ ಈಗ ತಾನು ಕಿಂಚಿಜ್ಞ ನೆನಿಸಿದ. ಇದೇ ಮಾಯಾಮಲ. ಸರ್ವಕರ್ತೃತ್ವಶಕ್ತಿ ಮರೆಯಾಗಿ ತಾನು ಕಿಂಚಿತ್ಕರ್ತೃ ಎಂದು ತಿಳಿದ; ಇದೇ ಕಾರ್ಮಮಲ. ಈ ಬಗೆಯ ಮೂರು ಮಲಗಳಿಂದ ಆವೃತನಾದ ಜೀವನು ಸಂಸಾರಿಯೆನಿಸಿ, ಜನನ ಮರಣಗಳ ಸುಳಿಯಲ್ಲಿ ಬಿದ್ದು ಪರಿಭ್ರಮಿಸತೊಡಗಿದ. ಶಿವದೀಕ್ಷೆಯಿಂದ ಜೀವಿಗೆ ಆವರಿಸಿದ್ದ ಮೇಲೆ ಹೇಳಿದ ಮೂರೂ ಮಲಗಳು ನಾಶವಾಗುತ್ತವೆ.

ದೀಕ್ಷೆ ಮೂರು ವಿಧ. ವೇಧಾ, ಮಾಂತ್ರೀ ಮತ್ತು ಕ್ರಿಯಾ ಎಂದು. ಗುರುವು ಶಿಷ್ಯನನ್ನು ಸಮೀಪಕ್ಕೆ ಕರೆದು ಅವನನ್ನು ಕೃಪಾದೃಷ್ಟಿಯಿಂದ ನೋಡಿ ಅವನ ಮಸ್ತಕದ ಮೇಲೆ ಹಸ್ತವನ್ನು ಇಡುವುದೇ ವೇಧಾದೀಕ್ಷೆ. ಇದರಿಂದ ಜೀವನ ಆಣವ ಮಲವು ನಷ್ಟವಾಗುತ್ತದೆ. ತರುವಾಯ ಶಿವದೀಕ್ಷಾಂಗವಾಗಿ ಎಸಗುವ ಮಂತ್ರ ದೀಕ್ಷೆಯಿಂದ ಅವನಲ್ಲಿದ್ದ ಮಾಯಾಮಲವೂ. ಕುಂಡ ಮಂಡಲಾತ್ಮಕವಾದ ಕ್ರಿಯಾ ದೀಕ್ಷೆಯಿಂದ ಕಾರ್ಮಮಲವೂ ನಷ್ಟವಾಗಿ ಅವನು ಪರಿಶುದ್ಧವಾದ ಅಪರಂಜಿಯಂತೆ ಬೆಳಗುವ ಶಿವಭಕ್ತನೆನಿಸುತ್ತಾನೆ.

ದೀಯತೇ ಚ ಶಿವಜ್ಞಾನಂ ಕ್ಷೀಯತೇ ಪಾಶಸಂಚಯಃ ।
ತಸ್ಮಾದತಃ ಸಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈಃ (ಸಿ.ಶಿ. ೫)
ದೀಕ್ಷಯಾ ಮುಚ್ಯತೇ ದೇಹೀ ತ್ರಿವಿಧಾತ್ ಪಾಶಬಂಧನಾತ್ ।
ಶಿವತ್ವಂ ಯಾತಿ ಸತತಂ ನ ಪುನಃ ಪಶುತಾಂ ವ್ರಜೇತ್ ॥
(ವೀರಶೈವಾಚಾರ ಕೌಸ್ತುಭ)

ಮುಂತಾದ ಉಕ್ತಿಗಳು ಈ ವಿಷಯವನ್ನು ಸಮರ್ಥಿಸುತ್ತವೆ.

### ಮುಕ್ತಿ ಉಪಾಯ

ಶಿವದೀಕ್ಷೆಯಿಂದ ಪಾಶಮುಕ್ತನಾದ ಜೀವನನ್ನು ಉದ್ಧರಿಸುವುದಕ್ಕಾಗಿಯೇ ಭಕ್ತಿಯು ಅವನನ್ನು ಆಶ್ರಯಿಸುತ್ತದೆ. ಈ ಭಕ್ತಿಯು ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ ಮತ್ತು ಸಮರಸ ಎಂಬ ಆರು ಹಂತಗಳಲ್ಲಿ ಭಕ್ತನನ್ನು ಮೇಲೆ ಮೇಲೆ ಕೊಂಡೊಯ್ದು ಶಿವನಲ್ಲಿ ಸಮರಸಗೊಳಿಸುತ್ತದೆ. ಅದರ ಕ್ರಮವನ್ನು ಹೀಗೆ ಸಂಗ್ರಹಿಸಲಾಗಿದೆ.

ಷಟ್‌ಸ್ಥಲ ಸೋಪಾನ

ಭಕ್ತಸ್ಥಲ :—ಇದು 'ಬೀಜವೃಕ್ಷನ್ಯಾಯ'ಸ್ಥಲ: ಶಕ್ತಿಪಾತ (ಶಿವಕೃಪೆ) ದಿಂದ ಕೃತಾರ್ಥನಾಗಿ ಶಿವದೀಕ್ಷೆ ಪಡೆದ ಜೀವನಲ್ಲಿ ಭಕ್ತಿಯು ಶ್ರದ್ಧಾ ರೂಪವಾಗಿ ಇರುತ್ತದೆ. ಆಗ ಅವನಲ್ಲಿ ದೇಹಾದಿ ಅಭಿಮಾನವು ನಷ್ಟವಾಗಿ ಅವನಿಗೆ ಗುರು-ಲಿಂಗ-ಜಂಗಮ-ಭಸ್ಮ-ರುದ್ರಾಕ್ಷ-ಮಂತ್ರ-ಪಾದೋದಕ ಮತ್ತು ಪ್ರಸಾದ ಎಂಬ ಅಷ್ಟಾವರಣಗಳಲ್ಲಿ, ಲಿಂಗಾಚಾರ-ಸದಾಚಾರ-ಶಿವಾಚಾರ-ಗಣಾಚಾರ ಮತ್ತು ಭೃತ್ಯಾಚಾರ ಮುಂತಾದ ಪಂಚ ಆಚಾರಗಳಲ್ಲಿ ಶ್ರದ್ಧೆಮೂಡಿ ಅವುಗಳನ್ನು ಅನುಷ್ಠಾನಮಾಡುವ ಪ್ರವೃತ್ತಿಯುಂಟಾಗುತ್ತದೆ. ಈ ಬಗೆಯ ಅನುಷ್ಠಾನದ ಪ್ರಭಾವದಿಂದ ಬೆಣ್ಣೆ ತೆಗೆಯಲು ಮೊಸರನ್ನು ಮಥಿಸುವಂತೆ ಜೀವಾತ್ಮನಲ್ಲಿ ಶಿವತ್ವ ಅಭಿವ್ಯಕ್ತಿಗಾಗಿ ಪ್ರೇಮಮಂಥನವು ಆರಂಭವಾಗುತ್ತದೆ.

> ಸದಾಚಾರಃ ಶಿವೇ ಭಕ್ತಿರ್ಲಿಂಗೇ ಜಂಗಮ ಏಕಧೀಃ ।
> ಲಾಂಛನೇ ಶರಣೇ ಭಕ್ತಿರ್ಭಕ್ತಸ್ಥಲಮನುತ್ತಮಮ್ ॥

ಎಂಬುದು ಈ ಸ್ಥಲದ ಸ್ವರೂಪ.

ಮಾಹೇಶ್ವರಸ್ಥಲ:—ಇದು 'ಸಲಿಲಮುಕ್ತನ್ಯಾಯ'ಸ್ಥಲ. ಕಡಲಿನಲ್ಲಿರುವ ಮುತ್ತಿನ ಚಿಪ್ಪಿನಲ್ಲಿ ಬಿದ್ದ ಸ್ವಾತೀ ಮಳೆಯ ನೀರುಹನಿ ಕಾಲಾಂತರದಲ್ಲಿ ಗಟ್ಟಿಗೊಂಡು ಮುತ್ತು ಆಗುವಂತೆ ಭಕ್ತನ ಈಶ್ವರಾಭಿಮುಖವಾದ ಶ್ರದ್ಧೆಯೇ ಚಿತ್ತಸ್ಥೈರ್ಯರೂಪದಿಂದ ಘನೀಭಾವ ಪಡೆದು ನಿಷ್ಠೆಯಾಗಿ ಪರಿಣಮಿಸುತ್ತದೆ. ಆದ್ದರಿಂದ ಈ ಸ್ಥಲದಲ್ಲಿರುವ ಭಕ್ತಿಗೆ 'ನಿಷ್ಠಾಭಕ್ತಿ' ಎಂದು ಹೆಸರು. ಅದರಿಂದ ಸಾಧಕನು ತನ್ನ ಆಚಾರ ವಿಚಾರ ಮತ್ತು ಅನುಷ್ಠಾನಗಳಲ್ಲಿ ದೃಢವ್ರತಿಯಾಗುತ್ತಾನೆ. ಅವನೇ ಶಿವವ್ರತಿ.

> ಕೇವಲೇ ಸಹಜೇ ದಾನೇ ನಿಷ್ಣಾತಃ ಶಿವತತ್ಪರಃ ।
> ಬ್ರಹ್ಮಾದಿಸ್ಥಾನವಿಮುಖೋ ಭಕ್ತೋ ಮಾಹೇಶ್ವರಃ ಸ್ಮೃತಃ ॥

ತನ್ನವೆನಿಸಿದ್ದ ತನು, ಮನ ಮತ್ತು ಧನವೆಂಬ ತ್ರಿವಿಧವನ್ನು ದಾಸೋಽಹಂ ಭಾವದಿಂದ ದಾನಮಾಡಿ ಬ್ರಹ್ಮಪದವಿಯೇ ಮೊದಲಾದುವನ್ನೆಲ್ಲ ತೃಣಕ್ಕೆ ಸಮಾನವಾಗಿ ಭಾವಿಸುವ ಭಕ್ತನೇ ಮಾಹೇಶ್ವರನೆನಿಸುತ್ತಾನೆ.

ಪ್ರಸಾದಿಸ್ಥಲ :—ಇದು 'ಅನಲಕಾಷ್ಠನ್ಯಾಯ'ಸ್ಥಲ. ಇಲ್ಲಿಯ ಭಕ್ತಿಯು ಚಿತ್ತ ಶುದ್ಧಿಯ ಮೂಲಕ 'ಅವಧಾನ ಭಕ್ತಿ' ಎನಿಸುತ್ತದೆ. ಕಾಷ್ಠಕ್ಕೆ ಸೋಂಕಿದ ಬೆಂಕಿಯು ಕಾಷ್ಠವನ್ನು ಸಂಪೂರ್ಣವಾಗಿ ವ್ಯಾಪಿಸಿ ಸುಟ್ಟು ಹೇಗೆ ಕಾಷ್ಠಗುಣ ಗಳನ್ನು ಕಳೆಯುತ್ತದೆಯೋ ಅದರಂತೆ ಈಶ್ವರ ಪ್ರೇಮವು ಅವಧಾನವೆನಿಸಿ ಸಾಧಕನ ತ್ರಿಕರಣಗಳನ್ನೂ ವ್ಯಾಪಿಸಿ ಅಲ್ಲಿಯ ಶಬ್ದ ಸ್ಪರ್ಶ ಮೊದಲಾದ ತನ್ಮಾತ್ರಾ ವಿಷಯ ಗಳೆನಿಸಿದ ಸ್ರಕ್‌ಚಂದನಾದಿ ವಿಷಯಗಳನ್ನು ಭಸ್ಮಗೊಳಿಸಿ ಅವನ್ನು ಪ್ರಸಾದರೂಪ ವಾಗಿ ಪರಿವರ್ತಿಸುತ್ತದೆ. ಆಗ ಸಾಧಕನಲ್ಲಿ ಚಿತ್ತಪ್ರಸನ್ನತೆ ಮೂಡುತ್ತದೆ. ಅಂಥ ಭಕ್ತನ ವ್ಯವಹಾರವೆಲ್ಲ ಶಿವರೂಪ. ಅವನ ಆಚಾರ ಶಿವಾಚಾರವೆಂದೆನಿಸಿ ಅವನು 'ಪ್ರಸಾದಕಾಯ'ನಾಗುತ್ತಾನೆ.

ಮನಃ ಪ್ರಸಾದ ಸಿದ್ಧ್ಯರ್ಥಂ ನಿರ್ಮಲಜ್ಞಾನಕಾರಣಮ್ ।
ಶಿವಪ್ರಸಾದಂ ಸ್ವೀಕುರ್ವನ್ ಪ್ರಸಾದೀ ಹ್ಯೇಷ ಕಥ್ಯತೇ ॥

ಪ್ರಾಣಲಿಂಗಿಸ್ಥಲ :—ಇಲ್ಲಿಯದು 'ಅನುಭವ ಭಕ್ತಿ.' ಅವನ ಅನುಭವ ಭ್ರಮರವನೆ ನೆನೆ ನೆನೆದು ಕೀಟವು ಭ್ರಮರವೇ ಆಗುವ ಪರಿ.

ಕೀಟೋ ಭ್ರಮರಯೋಗೇನ ಭ್ರಮರೋ ಭವತಿ ಧ್ರುವಮ್ ।
ಶಿವಭಕ್ತಃ ಶಿವಯೋಗೇನ ಶಿವೋ ಭವತಿ ನಿಶ್ಚಿತಮ್ ॥

ಎಂಬಂತೆ ಜೀವಭ್ರಮೆ ಅಳಿದ ಸಾಧಕನು ಶಿವಾನುಭಾವಿಯಾಗುತ್ತಾನೆ. ನಿರಂತರವೂ ಶಿವಚಿಂತನದಲ್ಲಿರುವ ಸಾಧಕನು ಶಿವಧ್ಯಾನ-ಪೂಜಾ-ಜಪಾದಿಗಳಲ್ಲಿ ಶಿವನ ಅನುಭವ ಪಡೆಯುತ್ತಾನೆ.

ಲಿಂಗಂ ಚಿದಾತ್ಮಕಂ ಬ್ರಹ್ಮ ತಚ್ಛಕ್ತಿಃ ಪ್ರಾಣರೂಪಿಣೀ ।
ತದ್ರೂಪಲಿಂಗವಿಜ್ಞಾನೀ ಪ್ರಾಣಲಿಂಗೀತಿ ಕಥ್ಯತೇ ॥

ಎಂಬುದು ಅವನ ಸ್ಥಿತಿ. ಇದು 'ಭ್ರಮರಕೀಟನ್ಯಾಯ' ಸ್ಥಲ.

ಶರಣಸ್ಥಲ :—'ಸತೀಪತಿನ್ಯಾಯ'ಸ್ಥಲ ಇದು. ಇಲ್ಲಿಯದು 'ಆನಂದ ಭಕ್ತಿ'. ಶಿವನ ನಿತ್ಯತ್ವ ವಿಷಯದಲ್ಲಿ ಉಂಟಾದ ನಿಶ್ಚಿಂತೆಯಿಂದ ಅವನಿಗೆ ಆನಂದ. ಇಲ್ಲಿಯ ಸಾಧಕ ಶಿವಾನಂದಿ. ಈ ಸ್ಥಿತಿಯನ್ನು ಶ್ರುತಿಯು 'ಯಥಾ ಪ್ರಿಯಯಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾತರಂ । ತಥಾ ಬ್ರಹ್ಮಣಾ ಸಂ ಪರಿಷ್ವಕ್ತಃ ನ ಕಿಂಚಿತ್ ವೇದ ನಾಂತರಮ್' ಎಂಬುದಾಗಿರುತ್ತದೆ.

ಸತೀ ಚಾಹಂ ಪತಿರ್ಲಿಂಗಂ ಹೃದಿ ಯುಕ್ತಃ ಸ್ವಯಂ ಪ್ರಭುಃ ।
ಪ್ರಾಪಂಚಿಕ ಸುಖಂ ನಾಸ್ತಿ ಶರಣಸ್ಥಲಮುತ್ತಮಮ್ ॥

ಐಕ್ಯಸ್ಥಲ :—ಇದು 'ಶಿಖಿಕರ್ಪೂರ ನ್ಯಾಯ'ಸ್ಥಲ. ಇಲ್ಲಿಯದು 'ಸಮರಸ ಭಕ್ತಿ'. ಭೂತವಸ್ತುಗಳೆನಿಸಿದ ಶಿಖಿ ಮತ್ತು ಕರ್ಪೂರಗಳು ಸಂಯೋಗ ಮಾತ್ರದಿಂದ ಒಂದಾಗಿ ಉರಿದು ಕಡೆಗೆ ಎರಡೂ ಇಲ್ಲವಾಗುವಂತೆ ಶರಣನೆನಿಸಿದ ಸಾಧಕನು ಸಮರಸ ಭಕ್ತಿಯ ಪ್ರಭಾವದಿಂದ ಕಿಂಚಿಜ್ಞತ್ವ-ಕಿಂಚಿತ್ಕರ್ತೃತ್ವಾದಿ ಜೀವಗುಣ ಅಳಿದು ಮುಕ್ತನಾಗಿ ಸರ್ವಜ್ಞತ್ವ-ಸರ್ವಕರ್ತೃತ್ವಗಳು ಮೂಡಿ ನೀರಿನಲ್ಲಿ ನೀರು, ಬೆಂಕಿಯಲ್ಲಿ ಬೆಂಕಿ ಬೆರೆದಂತೆ ನದೀಸಮುದ್ರನ್ಯಾಯದಿಂದ ಸಾಮರಸ್ಯ ಪಡೆಯುತ್ತಾನೆ.

ಪ್ರಾಣಲಿಂಗಾದಿ ಯೋಗೇನ ಸುಖಾತಿಶಯಮೇಯಿವಾನ್ ।
ಶರಣಾಖ್ಯಶ್ಶಿವೇಸ್ಸೈಕ್ಯ ಭಾವನಾದ್ಯೈಕ್ಯವಾನ್ ಭವೇತ್ ॥

ಇದೇ ಸಮರಸಮುಕ್ತಿಯ ಸ್ವರೂಪ 'ಲಿಂಗಾಂಗಸಾಮರಸ್ಯ'.

ಕರ್ಮ-ಜ್ಞಾನ-ಭಕ್ತಿ :—ದ್ವೈತ ಮತ್ತು ಅದ್ವೈತಗಳಿಗೆ ಸಮನ್ವಯವನ್ನು ಹೇಳುವುದು ಮಾತ್ರವಲ್ಲದೆ ಈ ಸಿದ್ಧಾಂತದಲ್ಲಿ ಕರ್ಮ ಮತ್ತು ಜ್ಞಾನಗಳಿಗೆ ಸಮ ಸಮುಚ್ಚಯವನ್ನು ಹೇಳಲಾಗಿದೆ. ವೇದಾಂತಿಗಳಲ್ಲಿ ಕೆಲವರು ಮೊದಲು ಕರ್ಮ, ಅನಂತರ ಜ್ಞಾನ, ಜ್ಞಾನದಿಂದ ಮೋಕ್ಷ ಎಂದು ಹೇಳುತ್ತಾರೆ. ಗಿಡವು ಬೆಳೆದು ಕ್ರಮವಾಗಿ ಮೊದಲು ಹೂ ಬಿಟ್ಟು ತರುವಾಯ ಹಣ್ಣು ಬಿಡುವಂತೆ. ಇದಕ್ಕೆ 'ಕ್ರಮಸಮುಚ್ಚಯ' ವೆಂದು ಹೆಸರು. ಆದರೆ ವೀರಶೈವವು ಕರ್ಮ-ಜ್ಞಾನಗಳೆರಡೂ ಮುಕ್ತಿಗೆ ಸಾಧನ ಎಂದು ಹೇಳುತ್ತದೆ. ಇದಕ್ಕಾಗಿ ವೀರಶೈವ ಆಚಾರ್ಯರು 'ಅಂಧಪಂಗುನ್ಯಾಯ'[1]ವನ್ನು ಉದಾಹರಿಸುತ್ತಾರೆ. ಗಗನದಲ್ಲಿ ಹಾರುವ ಹಕ್ಕಿಗೆ ಹೇಗೆ ಎರಡೂ ಪಕ್ಷಗಳು ಆವಶ್ಯಕವೋ ಅದರಂತೆ ಮೋಕ್ಷಕಾಮಿಗೆ ಕರ್ಮಜ್ಞಾನಗಳೆರಡೂ ಮುಖ್ಯ. ಕೇವಲ ಔಷಧಜ್ಞಾನದಿಂದಲೇ ರೋಗ ವಾಸಿಯಾಗುವುದಿಲ್ಲ. ಆ ಔಷಧ ಸೇವನ ರೂಪಕ್ರಿಯೆಯೂ ಅತ್ಯಾವಶ್ಯಕ. ಭಕ್ತಿ

---

1 ಜ್ಞಾನವಿಲ್ಲದ ಕ್ರಿಯೆ ಅಂಧ (ಕುರುಡ), ಕರ್ಮವಿಲ್ಲದ ಜ್ಞಾನ ಪಂಗು (ಕುಂಟ). ಇವು ಒಂದೊಂದೇ ತಮ್ಮ ಗುರಿ ಮುಟ್ಟಲಾರವು. ಅದಕ್ಕಾಗಿ ಕುರುಡನ ಭುಜದ ಮೇಲೆ ಕುಳಿತ ಕುಂಟನ ಸೂಚನೆಯಂತೆ ಕುರುಡ ದಾರಿ ನಡೆದು ಇಬ್ಬರೂ ಗುರಿ ಮುಟ್ಟುವರು.

ಯಲ್ಲಿ ಕರ್ಮ-ಜ್ಞಾನಗಳೆರಡೂ ಹದವರಿತು ಬೆರೆದಿರುವುದರಿಂದ ವೀರಶೈವವು ಭಕ್ತಿಗೆ ಪ್ರಾಮುಖ್ಯ ನೀಡಿದೆ.

**ಭಕ್ತಿಕಾಂಡದ ವೈಶಿಷ್ಟ್ಯ**

ಧರ್ಮ-ಅಧರ್ಮ ಕರ್ಮಗಳಿಗೆಲ್ಲ ನಾನೇ ಕರ್ತನು ಎಂಬ ಅಭಿಮಾನ ಕರ್ಮ ಕಾಂಡದ್ದು. ನಾನು ಕರ್ತನಲ್ಲ, ಕರ್ತೃತ್ವವೂ ನನಗಿಲ್ಲ. ನಾನು ಸಾಕ್ಷಿಯೂ ಅಲ್ಲ ಎಂಬ ಅಭಿಮಾನ ಜ್ಞಾನಕಾಂಡದ್ದು. ಭಕ್ತಿಕಾಂಡದಲ್ಲಿ ನಾನು ಕರ್ಮ ಕರ್ತೃವೂ ಅಲ್ಲ, ಸಾಕ್ಷಿಯೂ ಅಲ್ಲ, ಆದರೆ ಇದೆಲ್ಲಕ್ಕೂ ಶಿವನೇ ಕರ್ತೃ ಹಾಗೂ ಸಾಕ್ಷಿ ಎಂದು ದಾಸೋಽಹಂಭಾವದಿಂದಿರುವುದೇ ಭಕ್ತಿಕಾಂಡದ ವೈಶಿಷ್ಟ್ಯ.[1] ಶರೀರ ಮೊದಲಾದ ಪದಾರ್ಥಗಳನ್ನೆಲ್ಲ ಭಗವದರ್ಪಣಮಾಡಿ ಅವನೇ ನಾನೆಂಬ ಭಾವದಿಂದಿರುವುದೇ ದಾಸೋಹಂಭಾವ.[2]

ಸ್ತ್ರೀ-ಪುರುಷ ಸಂಸ್ಕಾರ :—ಕೆಲವು ವೈದಿಕ ಪಂಥಗಳಲ್ಲಿ ಸ್ತ್ರೀಯರಿಗೆ ಹಾಗೂ ಶೂದ್ರರಿಗೆ ಉಪನಯನಾದಿ ಸಂಸ್ಕಾರ ನಿಷೇಧವಿದೆ. ಆದರೆ ವೀರಶೈವ ಧರ್ಮವು ಉಪನಿಷತ್ಕಾಲದಲ್ಲಿದ್ದ ಉದಾರವಾದ ವೈದಿಕ ಧರ್ಮವನ್ನು ಉಳಿಸಿ ಕೊಂಡು ಶಿವಕೃಪೆಗೆ ಪಾತ್ರರಾಗಿ 'ಶಕ್ತಿಪಾತ' ಲಕ್ಷಣಗಳಿಂದ ಕೂಡಿದ ಎಲ್ಲ ಮಾನವರಿಗೂ ಲಿಂಗಭೇದ ಜಾತಿ-ವರ್ಣಭೇದಗಳ ಅಂತರವನ್ನು ಪರಿಗಣಿಸದೆ ಶಿವ ದೀಕ್ಷಾ ಸಂಸ್ಕಾರ ನೀಡುವ ವಿವೇಕವನ್ನು ತಳೆದಿದೆ.

---

1 ಅಹಂ ಕರ್ತಾ ಸಮಸ್ತಸ್ಯ ಧರ್ಮಾಧರ್ಮಸ್ಯ ಕರ್ಮಣಃ ।
ಇತ್ಯನೇನಾಭಿಮಾನೇನ ಕರ್ಮಕಾಂಡೋಽಯಮುಚ್ಯತೇ ॥೧೮॥
ನಾಹಂ ಕರ್ತಾಸ್ಯ ಕರ್ತೃತ್ವಂ ನೈವ ಸಾಕ್ಷೀ ಸ್ವಭಾವತಃ ।
ಇತ್ಯನೇನಾಭಿಮಾನೇನ ಜ್ಞಾನಕಾಂಡೋಽಯಮುಚ್ಯತೇ ॥೧೯॥
ನ ಕರ್ತಾ ನ ಸಾಕ್ಷೀ ಚ ಶಿವ ಏವೇತಿ ಕರ್ಮಣೋಃ ।
ದ್ವಯಾಭಿಮಾನರಾಹಿತ್ಯಂ ಭಕ್ತಿಕಾಂಡೋಽಯಮುಚ್ಯತೇ ॥೨೦॥
(ಅನು. ಸೂ. ಅ. ೮)

2 ಶರೀರಾದಿ ಪದಾರ್ಥಾಂಶ್ಚ ದತ್ವಾ ದಾನಂ ಸಮರ್ಪಣಮ್ ।
ಸಮರ್ಪ್ಯ ಸೋಽಹಮಸ್ಮೀತಿ ದಾಸೋಽಹಂ ಭಾವ ಉಚ್ಯತೇ ॥೬೦॥
(—ಅನು. ಸೂ. ಅ. ೭)

ಕಾಯಕ :—ಕೆಲವರು ವೇದಾಂತಿಗಳು ಇಹವನ್ನು ತುಚ್ಛವೆಂದೂ, ದೇಹವನ್ನು ಹೇಯವೆಂದೂ ಭಾವಿಸಿ ಹೆಣ್ಣು-ಹೊನ್ನು ಮತ್ತು ಮಣ್ಣುಗಳನ್ನು ಹೀಗಳೆಯುವುದುಂಟು. ಆದರೆ ವೀರಶೈವ ಅನುಭಾವಿಗಳು ಜಗತ್ತು ಶಿವಸ್ವರೂಪವೆಂದು ಭಾವಿಸಿ, ಪ್ರತಿಯೊಬ್ಬನೂ 'ಸತ್ಯಶುದ್ಧಕಾಯಕ'ವನ್ನು ಕೈಗೊಂಡು 'ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು' ಎಂಬ ನೀತಿಯನ್ನು ಅನುಸರಿಸಿ ಸಾಮಾಜಿಕವಾಗಿಯೂ ಆತ್ಮೋದ್ಧಾರ ಲೋಕೋದ್ಧಾರ ಕಾರ್ಯಗಳಲ್ಲಿ ಭಾಗಿಯಾಗಬೇಕು. ಎನ್ನುತ್ತಾರೆ. ಅದರಿಂದ ಈ ಧರ್ಮ ಪರಮಪ್ರೈದಿಕ. 'ತೇ ವೀರಶೈವಾ ಲೋಕಾನಾಂ ನಿತ್ಯಂ ಕ್ಷೇಮಾಭಿಲಾಷಿಣಃ' ಎಂದು ಶಾಸ್ತ್ರವು ಹೇಳಿದರೆ—ಶಿವಶರಣರು "ಸಕಲ ಜೀವಾವಳಿಗೆ ಲೇಸನ್ನು ಬಯಸುವುದೇ" ವೀರಶೈವ ಧರ್ಮದ ತಿರುಳೆಂದು ಬೋಧಿಸಿದ್ದಾರೆ. ಇದೇ ವಿಶೇಷಾದ್ವೈತ ಸಿದ್ಧಾಂತ ಸಾರ.

## ಲಿಂಗಧಾರಣತತ್ತ್ವ

ವೀರಶೈವದಲ್ಲಿ ಶಿವದೀಕ್ಷೆಯ ಅಂಗವಾಗಿ ಗುರುವು ಶಿಷ್ಯನಿಗೆ ಲಿಂಗಧಾರಣವನ್ನು ಮಾಡುತ್ತಾನೆ. ಈ ಲಿಂಗಕ್ಕೆ 'ಇಷ್ಟಲಿಂಗ' ವೆಂದು ಹೆಸರು. ಇದು ಮಾನವ ಹೃದಯ (ದಹರಾಕಾಶ) ದಲ್ಲಿರುವ ಪ್ರಾಣಲಿಂಗದ ಪ್ರತೀಕ. ಭಗವದ್ಗೀತೆಯು ಎಲ್ಲ ಪ್ರಾಣಿಗಳ ಹೃದಯದಲ್ಲಿಯೂ ಈಶ್ವರಸಾನ್ನಿಧ್ಯವನ್ನು ಒಪ್ಪಿದೆ.[1] ಹಾಗೆಯೇ ಹೃದಯಾಕಾಶದಲ್ಲಿರುವ ಈಶ್ವರನಿಗೆ 'ಪರಮಾತ್ಮ' ನೆಂಬ ಹೆಸರಿದೆ.[2] ಇದನ್ನೇ ಶ್ರುತಿಯಲ್ಲಿ

"ದಹ್ರಂ ವಿಪಾಪ್ಮಂ ಪರವೇಶ್ಮಭೂತಂ
ಹೃತ್ಪುಂಡರೀಕಂ ಪುರಮಧ್ಯ ಸಂಸ್ಥಂ।
ತತ್ರಾಪಿ ದಹ್ರಂ ಗಗನಂ ವಿಶೋಕಃ
ತಸ್ಮಿನ್ ಯದಂತಸ್ತದು ಪಾಸಿತವ್ಯಮ್"॥

ಎಂದು ವಿಧಿಸಲಾಗಿದೆ. ಎಂದರೆ (—ತೈತ್ತಿರೀಯ ಉಪನಿಷತ್)

'ಹೃದಯಕಮಲದ ಮಧ್ಯದಲ್ಲಿ 'ದಹರಾಕಾಶ' ವೆಂಬ ಶೋಕರಹಿತವಾದ ಒಂದು ವಸ್ತುವಿದೆ. ಅದನ್ನು ಎಲ್ಲರೂ ಉಪಾಸಿಸಬೇಕು' ಎಂದು ಹೇಳಿದೆ. ಆ ವಸ್ತುವನ್ನು "ಪ್ರಾಣಲಿಂಗ" ವೆಂದು ಶ್ರೀರೇಣುಕಾಚಾರ್ಯರು ಅಪ್ಪಣೆ ಮಾಡಿ

---

1. 'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ' (ಭ. ಗೀ ೧೮-೬೧)
2. 'ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ' (ಭ. ಗೀ ೧೫-೧೭)

ದ್ದಾರೆ. "ಪ್ರತಿಯೊಬ್ಬ ಮಾನವನ ಆಧಾರ ಹೃದಯ ಮತ್ತು ಭ್ರೂಮಧ್ಯಗಳಲ್ಲಿ 'ಜ್ಯೋತಿರ್ಲಿಂಗ'ವು ಬೆಳಗುತ್ತಿದೆ. ಅದನ್ನು ಅನುಸಂಧಾನ ಮಾಡುವುದು ಆಂತರ ಲಿಂಗಧಾರಣವೆನಿಸುತ್ತದೆ.[3] ಹೀಗೆ ಹೃದಯಾಕಾಶದಲ್ಲಿ ಬೆಳಗುವ ಚೈತನ್ಯಾತ್ಮಕ ವಾದ ಲಿಂಗವನ್ನು ಜ್ಞಾನಯೋಗದಿಂದ ಎಲ್ಲರೂ ಅನುಸಂಧಾನ ಮಾಡಬೇಕು. ಇದರಿಂದ ಮಾನವನ ಎಲ್ಲ ಕ್ಲೇಶಗಳೂ ದೂರವಾಗುತ್ತವೆ. ಒಮ್ಮೆ ಅಂತರ್ಧಾರಣ ಮಾಡುವುದಕ್ಕೆ ಎಲ್ಲರಿಗೂ ಶಕ್ತಿಯಿರುವುದಿಲ್ಲ; ಅಂಥ ಶಕ್ತಿ ಇರಲಿ ಅಥವಾ ಇಲ್ಲದಿರಲಿ ಆ ಪ್ರಾಣಲಿಂಗದ ಪ್ರತೀಕವೆನಿಸಿದ ಬಾಹ್ಯಲಿಂಗವನ್ನು ಪ್ರತಿಯೊಬ್ಬನೂ ಧರಿಸಲೇ ಬೇಕು.[4] ಲಿಂಗಧಾರಣವನ್ನು ಪ್ರತಿಪಾದಿಸುವ ಈ ಕೆಳಗೆ ಕಂಡ ಶ್ರುತಿ ಗಳನ್ನು ವೀರಶೈವ ಮತಾಚಾರ್ಯರು ತಮ್ಮ ಭಾಷ್ಯಾದಿಗಳಲ್ಲಿ ವಿಸ್ತಾರವಾಗಿ ನಿರೂಪಿಸಿರುತ್ತಾರೆ.

"ಯೋ ವೇದಾದೌ ಸ್ವರಃ ಪ್ರೋಕ್ತಃ" (ತೈತ್ತಿರೀಯ) "ಅಯಂ ಮೇ ಹಸ್ತೋ ಭಗವಾನ್........"(ಋ. ೮–೧–೫೫) "ಓಂ ನಮೋ ಬ್ರಹ್ಮಣೇ ಧಾರಣಂ ಮೇ" (ತೈತ್ತರೀಯ) "ಓಂ ನಿಧನ ಪತಯೇ ನಮಃ, ಏತತ್ಸೋಽಮಸ್ಯ ಸೂರ್ಯಸ್ಯ ಸರ್ವಲಿಂಗಗ್ಂ ಸ್ಥಾಪಯತಿ" (ತೈತ್ತರೀಯ) "ಯಜ್ಞೋಪವೀತಂ ಪರಮಂ ಪವಿತ್ರಂ" "ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ" (ಋ. ೭–೩–೮) "ಯಶ್ಛಂದಸಾಂ ವೃಷಭೋ ವಿಶ್ವರೂಪಃ" (ತೈ.ಶಿಕ್ಷಾ ೪.)" ಸರ್ವಾ ನನಶಿರೋಗ್ರೀವಃ (ಶ್ವೇ. ೩. ೧೧.) "ಯಾ ತೇ ರುದ್ರ ಶಿವಾ ತನೂರಘೋರಾ (ರುದ್ರಾಧ್ಯಾಯ) ಮುಂತಾದ ಮಂತ್ರಗಳು ಮಾನವನು ಮುಕ್ತಿಗಾಗಿ ಲಿಂಗ ಧಾರಣವನ್ನು ಗುರುಮುಖದಿಂದ ಮಾಡಿಕೊಳ್ಳಬೇಕು ಎಂದು ವಿಧಿಸಿವೆ.

ಗೌತಮ ಧರ್ಮಸ್ಮೃತಿಯಲ್ಲಿ ಬ್ರಾಹ್ಮಣನ ಲಕ್ಷಣವನ್ನು ಹೇಳುವಲ್ಲಿ—

---

3. ಆಧಾರೇ ಹೃದಯೇ ವಾಪಿ ಭ್ರೂಮಧ್ಯೇ ವಾ ನಿರಂತರಂ ।
ಜ್ಯೋತಿರ್ಲಿಂಗಾನುಸಂಧಾನಮಾಂತರಂ ಲಿಂಗಧಾರಣಂ ॥
(ಸಿ. ಶಿ. ಪ. ೬. ೩೯)

4. ಸರ್ವೇ ಚ ಜ್ಞಾನಯೋಗೇನ ಸರ್ವಕಾರಣಕಾರಣಂ ।
ಪಶ್ಯಂತಿ ಹೃದಯೇ ಲಿಂಗಂ ಪರಮಾನಂದಲಕ್ಷಣಂ ॥
ಅಂತರ್ಧಾರಯಿಂತುಂ ಲಿಂಗಮಶಕ್ತಶ್ಶಕ್ತಏವ ವಾ ।
ಬಾಹ್ಯಂ ಚ ಧಾರಯೇಲ್ಲಿಂಗಂ ತದ್ರೂಪಮಿತಿ ನಿಶ್ಚಯಾತ್ ॥
(—ಸಿ. ಶಿ. ಪ. ೬-೪೬-೨೪)

ಮುಖೇ ಮಂತ್ರೋ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಂ ।
ಶಿಖಾರುದ್ರಾಕ್ಷ ಭಸ್ಮಾನಿ ಇತಿ ಬ್ರಾಹ್ಮಣ ಲಕ್ಷಣಂ ॥

ಎಂದು "ಮಸ್ತಕಲಿಂಗಧಾರಣ"ವು ಬ್ರಾಹ್ಮಣನ ಲಕ್ಷಣಗಳಲ್ಲಿ ಒಂದು ಎಂದು ಹೇಳಿದೆ. ಈ ಶ್ಲೋಕದಲ್ಲಿರುವ "ಶಿಖಾರುದ್ರಾಕ್ಷ ಭಸ್ಮಾನಿ" ಎಂಬಲ್ಲಿ ಕೆಲವು ಪ್ರತಿಗಳಲ್ಲಿ "ಶಿಖಾಸೂತ್ರಂ ತಥಾ ಭಸ್ಮ" ಎಂಬ ಪಠಾಂತರ ವುಂಟು. ಈ ದೃಷ್ಟಿಯಿಂದ ಪ್ರಾಚೀನ ಕಾಲದಲ್ಲಿ ಬ್ರಾಹ್ಮಣರು "ಲಿಂಗಯಜ್ಞೋಪವೀತಿ" ಗಳಾಗಿದ್ದಂತೆ ತಿಳಿದು ಬರುತ್ತದೆ. ಇಂದಿಗೂ ವೀರಶೈವರಲ್ಲಿ "ಲಿಂಗ ಮತ್ತು ಯಜ್ಞೋಪವೀತ" ಧಾರಿಗಳಾದ ಒಂದು ಪಂಗಡವು "ಆರಾಧ್ಯ ಬ್ರಾಹ್ಮಣ" ಎಂಬ ಹೆಸರಿನಿಂದ ಅಸ್ತಿತ್ವದಲ್ಲಿದೆ. ವೀರಶೈವ ಮತಾಚಾರ್ಯರಲ್ಲಿ ಶ್ರೀಪತಿಪಂಡಿತ, ಮಲ್ಲಿಕಾರ್ಜುನಪಂಡಿತ, ಉದ್ಭರಾರಾಧ್ಯ ಬಸವೇಶ್ವರ ಮುಂತಾದವರು ಮೊದಲು 'ಲಿಂಗ-ಯಜ್ಞೋಪವೀತಿ' ಗಳಾಗಿದ್ದು ಮುಂದೆ ವೀರಶೈವಾಚಾರ್ಯರಿಂದ ಶಿವದೀಕ್ಷೆ ಪಡೆದು ಯಜ್ಞೋಪವೀತವನ್ನು ತ್ಯಜಿಸಿದಂತೆ ವೀರಶೈವೇತಿಹಾಸದಿಂದ ವೇದ್ಯವಾಗುತ್ತದೆ.

## ಲಿಂಗಪೂಜೆಯ ಪ್ರಾಚೀನತೆ

ಐತಿಹಾಸಿಕ ದೃಷ್ಟಿಯಿಂದ ಲಿಂಗಧಾರಣವು ಅತಿ ಪ್ರಾಚೀನವಾದುದು. ಅದು ಪ್ರಾಗೈತಿಹಾಸಿಕ ಯುಗಕ್ಕೆ ಸೇರಿದುದು ಎನ್ನಲಾಗಿದೆ. ಸಿಂಧೂತೀರದ ಹರಪ್ಪ-ಮೊಹೆಂಜೊದಾರೊ ಕಣಿವೆಯ ಭೂಗರ್ಭ ಸಂಶೋಧನೆಯಲ್ಲಿ ದೊರೆತಿರುವ ಅವಶೇಷಗಳಿಂದ ಅಲ್ಲಿಯ ಸಂಸ್ಕೃತಿ ವೇದಕಾಲಕ್ಕಿಂತ ಅತ್ಯಂತ ಪ್ರಾಚೀನವೆಂದು ನಿರ್ಧರಿಸಲಾಗಿದೆ. ಈ ಭೂಸಂಶೋಧನೆಯಲ್ಲಿ ದೊರೆತಿರುವ ಅವಶೇಷಗಳಲ್ಲಿ ಹತ್ತು ವಿಧವಾದ ಶಿವಲಿಂಗಗಳಲ್ಲಿ ಶರೀರದ ಮೇಲೆ ಧರಿಸಲು ಯೋಗ್ಯವಾದವುಗಳೂ ಇವೆಯೆಂದು ಊಹಿಸಲಾಗಿದೆ. ಧ್ಯಾನಾರೂಢನಾಗಿ ಪದ್ಮಾಸನದಲ್ಲಿ ಕುಳಿತಿರುವ ಶಿವನ ಮೂರ್ತಿಯನ್ನು ಕುರಿತು ಶ್ರೀ ಪಿ. ವಿ. ಕರ್ಮಾರ್‌ಕರ್ ಅವರು 'ರಿಲಿಜನ್ಸ್‌ ಆಫ್ ಇಂಡಿಯ' ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ[1] 'ಅಲೆನ್ ಮತ್ತು

---

1. ವೀರಶೈವದ ಉಗಮ ಮತ್ತು ಪ್ರಗತಿ. (ಪು. ೪೫-೫೧) ಶ್ರೀ ಟಿ. ಎಸ್. ಮಲ್ಲಪ್ಪನವರು ಹೈಕೋರ್ಟ್ ಜಡ್ಜ್, ಬೆಂಗಳೂರು.

ಅನ್‌ವಿನ್ ' ಎಂಬುವರೂ ಸಹ ಇದೇ ವಿಷಯವನ್ನು "Vedic Age" ಎಂಬ ಗ್ರಂಥದಲ್ಲಿ ಸಮರ್ಥಿಸಿ "ಯೋಗೇಶ್ವರ" ಮತ್ತು "ದಕ್ಷಿಣಾಮೂರ್ತಿ" ಮುಂತಾದ ಕಲ್ಪನೆಗಳು ಸಿಂಧೂತೀರದ ನಾಗರಿಕತೆಯ ಕಾಲಕ್ಕೇ ಇದ್ದುದಾಗಿ ನಿರ್ಧರಿಸಿದ್ದಾರೆ. ಶೈವಮತದ ಪ್ರಾಚೀನತೆಯನ್ನು ಕುರಿತು ಚರ್ಚಿಸಿರುವ ಶ್ರೀ ವಿ. ಆರ್. ರಾಮಚಂದ್ರದೀಕ್ಷಿತ್ ಎಂಎ., (ಮದರಾಸು ವಿಶ್ವವಿದ್ಯಾಲಯ) ಅವರು ಕಲ್ಯಾಣ ಶಿವಾಂಕಕ್ಕೆ ಬರೆದಿರುವ ಲೇಖನದಲ್ಲಿ ಈ ವಿಷಯವನ್ನು ವಿಸ್ತಾರವಾಗಿ ಚರ್ಚಿಸಿ "ಲಿಂಗಧಾರಣ ಮತ್ತು ಲಿಂಗಪೂಜಾದಿಗಳು ಆರ್ಯಸಂಸ್ಕೃತಿಗಿಂತಲೂ ಬಹುಪುರಾತನವೆಂದು ಸಮರ್ಥಿಸಿದ್ದಾರೆ.[2]

ಕೇವಲ ಭಾರತದಲ್ಲಿ ಮಾತ್ರವಲ್ಲದೆ ವಿದೇಶಗಳಲ್ಲಿಯೂ ಕೂಡ ಪುರಾತನ ಕಾಲದಲ್ಲಿಯೇ ನೂರಾರು ಶಿವಾಲಯಗಳು ವಿರಾಜಿಸುತ್ತಿದ್ದ ಬಗೆಗೆ ವಿದ್ವಾಂಸರು ವಿವೇಚಿಸಿದ್ದಾರೆ. ಆಫ್ರಿಕಾ ಮೊದಲಾದ ಖಂಡಗಳಲ್ಲಿರುವ ಶಿವಾಲಯಗಳನ್ನು ಕುರಿತು ಫ್ರೆಂಚ್ ದೇಶದ ಲುಯಿ ಎಂಬುವರು ಬರೆದಿರುವ ಗ್ರಂಥವನ್ನು ಅಧಿಕರಿಸಿ ಕಾಶಿಯ ವಿ|| ಬಾಬು ಬೇಜೂಸಿಂಹ ಅವರು ರಚಿಸಿರುವ "ನಿರ್ಮಾಲ್ಯರತ್ನಾಕರ" ಎಂಬ ಪುಸ್ತಕದ ಪ್ರಸ್ತಾನೆಯಲ್ಲಿ ಈ ಬಗ್ಗೆ ಹೀಗೆಂದಿದ್ದಾರೆ.

"ಉತ್ತರ ಆಫ್ರಿಕಾಖಂಡದ ಈಜಿಪ್ಟ್‌ನಲ್ಲಿರುವ ಮೆಂಫಿಸ್‌ನಲ್ಲಿ ನಂದಿವಾಹನ ತ್ರಿಶೂಲ-ಸರ್ಪ-ವ್ಯಾಘ್ರಚರ್ಮಾಂಬರಧಾರಿ ಪರಶಿವನ ವಿಗ್ರಹವಿದೆ. ಅಲ್ಲಿ ಈ ವಿಗ್ರಹಕ್ಕೆ ಅಸಿರಿಸ್ ಎಂಬ ಹೆಸರಿದೆ. ಟರ್ಕಿದೇಶದ ಬಾಬಿಲೋನ್‌ನಲ್ಲಿ ೧೨೦೦ ಘನ ಹಸ್ತ ಎತ್ತರದ ಶಿವಲಿಂಗವಿದೆ. ಹೆಡ್ರಾಪೋಲಿಸ್ ಪಟ್ಟಣದಲ್ಲಿ 300 ಘನ ಹಸ್ತ ಎತ್ತರವಿರುವ ಶಿವಲಿಂಗವಿದೆ. ಮುಸಲ್ಮಾನರ ಕ್ಷೇತ್ರವೆನಿಸಿರುವ ಮಕ್ಕಾದಲ್ಲಿರುವ ಮಕ್ಕೇಶ್ವರ ಲಿಂಗವು ಜಗತ್ಪ್ರಸಿದ್ಧ. ಅಮೆರಿಕಾಖಂಡಕ್ಕೆ ಸೇರಿದ ಬ್ರೆಜಿಲ್‌ನಲ್ಲಿರುವ ಶಿವಲಿಂಗ ಮತ್ತು ವಿಘ್ನೇಶ್ವರ. ಗ್ರೀಸ್ ದೇಶಕ್ಕೆ ಸೇರಿದ ಕಾರಿಂಥ್‌ನಲ್ಲಿ ಪಾರ್ವತಿ ವಿಗ್ರಹ, ಸ್ಕಾಟ್‌ಲೆಂಡ್‌ನ ಗ್ಲಾಸ್ಗೋ ಪಟ್ಟಣದ ಶಿವಲಿಂಗ, ಫ್ರೀಜಿಯನ್ ದೇಶದಲ್ಲಿರುವ ಏಟಿಸ್ ಶಿವಲಿಂಗ, ನಿನಿವಾಪಟ್ಟಣದಲ್ಲಿರುವ ಏಷೀರ್

2. ಕಲ್ಯಾಣ ಶಿವಾಂಕ (ಪು. ೧೬೮) plate XIII in vol. I of Mohenjodaro and Indus Civilization, Edited by Sir John Marshell.

ಎಂಬ ಶಿವಲಿಂಗ, ಯಹೂದಿ ದೇಶದಲ್ಲಿ ಆಪರೀದಿಸ್ಥಾನ್, ಚಿತ್ರಾಲ, ಕಾಬೂಲ್, ಬಲಖ್, ಬುಖಾರ ಮುಂತಾದ ಕಡೆಗಳಲ್ಲಿಯೂ ಸಹ ಅನೇಕ ಶಿವಲಿಂಗಗಳು ದೊರೆತಿವೆ. ಅನ್ನಾಂ (Annam) ಚಂಪಾ ದೇಶದಲ್ಲಿನ ಶಿವಾಲಯಗಳು ಸುಪ್ರಸಿದ್ಧ. ಅಲ್ಲಿಯ ಮಿ-ಸೋನ ಗ್ರಾಮದಲ್ಲಿರುವ ಭದ್ರೇಶ್ವರ ದೇವರಿಗೆ ಕ್ರಿ. ಶ. ೫ನೇ ಶತಮಾನದಲ್ಲಿ ಅಲ್ಲಿನ ರಾಜನು ದಾನಮಾಡಿರುವ ಬಗ್ಗೆ ಅನೇಕ ಶಾಸನಗಳಿವೆ. ಮಾತ್ರವಲ್ಲದೆ ಅಲ್ಲಿ ವಿಘ್ನೇಶ್ವರ ಮುಂತಾದ ದೇವತೆಗಳ ಹಸ್ತದಲ್ಲಿ ಶಿವಲಿಂಗವಿರುವುದು ಕಂಡುಬಂದಿದೆ. ಈ ದೇವಾಲಯಗಳ ವಿಷಯವನ್ನು ಕುರಿತು ದೇವಾಲಯಗಳ ಚಿತ್ರಸಹಿತ Het oudejavaen sijn cust (ಯವದ್ವೀಪ ಚಿತ್ರಕಲಾ) ಎಂಬ ಗ್ರಂಥವನ್ನು ಡಚ್ ಭಾಷೆಯಲ್ಲಿ ಬರೆದು ಪ್ರಕಟಿಸಿರುವ ಹಾಲೆಂಡ್ ದೇಶದ ಲೈಡನ್ ವಿಶ್ವವಿದ್ಯಾಲಯದ ಪ್ರೊ. ಎನ್. ಜೆ. ಕ್ರೋಮ್ ಅವರ ಬರಹಗಳು ಉಲ್ಲೇಖನೀಯವಾಗಿವೆ.

## ಲಿಂಗವಂತ ಧರ್ಮದ ಐತಿಹಾಸಿಕತೆ

ಲಿಂಗವನ್ನು ಶರೀರದ ಮೇಲೆ ಧರಿಸಿಕೊಳ್ಳುವ ಸಂಸ್ಕೃತಿ ಪ್ರಾಗೈತಿಹಾಸಿಕ ಕಾಲದಿಂದ ಬಂದುದೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಮೊಹೆಂಜೊದಾರೊ ಮತ್ತು ಹರಪ್ಪ ಕಣಿವೆಗಳಲ್ಲಿ ಪರಿಶೋಧನೆಗಳನ್ನು ನಡೆಸಿದವರಲ್ಲಿ ಒಬ್ಬರಾದ ಸರ್‌ಜಾನ್ ಮಾರ್ಷಲ್ ಅವರು ಅಲ್ಲಿ ಸಿಕ್ಕಿರುವ ಶಿವಲಿಂಗಗಳಲ್ಲಿ ಸಣ್ಣಲಿಂಗಗಳನ್ನು ಇಂದಿನ ಶೈವರಂತೆ ದೇಹದ ಮೇಲೆ ಧರಿಸಿ ಕೊಳ್ಳಲು ಉಪಯೋಗಿಸುತ್ತಿದ್ದರೆಂದೂ, ದೊಡ್ಡವನ್ನು ಪೂಜೆಗಾಗಿ ಉಪಯೋಗಿಸುತ್ತಿದ್ದರೆಂದೂ ಅಭಿಪ್ರಾಯಪಡಲಾಗಿದೆ. ಈ ಶೈವರು ವೀರಶೈವರೆಂದೇ ಅವರ ಗ್ರಂಥದ ೬೧ ನೆಯ ಪುಟದ ಅಡಿಟಿಪ್ಪಣಿಯಲ್ಲಿ ಸ್ಪಷ್ಟಪಡಿಸಿದ್ದಾರೆ.[1] ಕೀಥ್ ಮತ್ತು ಫ್ರೀಲಸ್ಕಿ ಎಂಬ ಪಂಡಿತರು ಯೂರೋಪಿನ ಭೂಮಧ್ಯ ಸಮುದ್ರತೀರದ ಕೆಲವು ಜನಾಂಗಗಳಲ್ಲಿ ಲಿಂಗ ಚಿಹ್ನೆವನ್ನು ತಾಯತದಂತೆ ಪೀಡಾ ನಿವಾರಣೆಗಾಗಿ ಕೊರಳಲ್ಲಿ ಕಟ್ಟಿಕೊಳ್ಳುವ ರೂಢಿಯಿತ್ತು. ಅಲ್ಲದೆ ಲಿಂಗಧಾರಣ ಕ್ರಮವನ್ನು ಆರ್ಯ ಮತ್ತು ದ್ರಾವಿಡರೀರ್ವರೂ, ಇವರಿಗಿಂತ ಮೊದಲೇ ಇದ್ದ ಆಸ್ಟ್ರೋ-ಏಷಿಯಾಟಿಕ್ ಎಂಬ ಜನಾಂಗದವರಿಂದ ಸ್ವೀಕರಿಸಿದ್ದರಬೇಕು." ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[2]

1. ವೀರಶೈವದ ಉಗಮ ಮತ್ತು ಪ್ರಗತಿ (ಪು. ೬೧).
2. ಶಿವರಹಸ್ಯ (ಪು. ೨೪-೨೫) ಶ್ರೀ ಶಂ. ಬಾ. ಜೋಷಿ.

ಋಗ್ವೇದದಲ್ಲಿ ಆರ್ಯವಿರೋಧಿ ಸಂಗಡಗಳಲ್ಲಿ 'ಫಣಿಗಣ'ವು ಮುಖ್ಯ. ಆಚಾರ್ಯ ಸಾಯಣರು 'ಫಣಿ' ಎಂದರೆ 'ವಣಿಕ್' ಎಂದು ಅರ್ಥಯಿಸಿದ್ದಾರೆ. ಈ ವಣಿಜರು ವ್ಯಾಪಾರಿಗಳು. ಇವರು ಹೊರದೇಶಗಳಲ್ಲಿ ಸಂಚರಿಸಿ ತಮ್ಮ ಲಿಂಗಾರ್ಚನೆ, ಲಿಂಗಧಾರಣಗಳನ್ನು ಒಳಗೊಂಡ ಸಂಸ್ಕೃತಿಯನ್ನು ಮೆಡಿಟರೇನಿಯ ತೀರದ ದೇಶಗಳವರೆಗೂ ಹಬ್ಬಿಸಿದರು.[1]

ಇಂದಿಗೂ ವೀರಶೈವರಲ್ಲಿ ಮುಖ್ಯವಾದ ಸಂಗಡಕ್ಕೆ " ಬಣಜಿಗ "ರೆಂದು ಹೆಸರು. ಆರ್ಯರು ಬರುವ ಮುನ್ನವೇ ಫಣಿ (ಬಣಜಿಗ) ಜನರು ಇಲ್ಲಿದ್ದರು. ಅವರಿಗೆ ಬಸವ (ವೃಷಭ)ನೇ ಧನ. ಆರ್ಯರೂ ಗೋಧನರು. ಗೋಧನಕ್ಕಾಗಿ ಈ ಎರಡು ಜಾತಿಗಳಲ್ಲಿ ಆಗಾಗ್ಗೆ ಜಗಳಗಳಾಗುತ್ತಿದ್ದವು. ಫಣಿ ಜನರನ್ನು 'ಅಕ್ರತು' ಎಂದರೆ 'ಯಜ್ಞವಿರೋಧಿ' ಗಳೆಂದು ಕರೆಯುತ್ತಿದ್ದರು. ಅವರಲ್ಲಿ ಅನೇಕ ಶಾಖೆ ಗಳಿದ್ದವು. ಅವುಗಳನ್ನು ಆರ್ಯರು ರಾಕ್ಷಸರು, ವಾನರರು, ಮುಂತಾಗಿ ಕರೆದರು. ಅವರಿಗೆ ಪ್ರತ್ಯೇಕವಾದ ಲಿಪಿ ಮತ್ತು ಸಂಸ್ಕೃತಿಗಳಿದ್ದವು.

ಶಿವನ ಹೆಸರುಗಳೆನಿಸಿದ ನಟರಾಜ, ತಾಂಡವನ್, ಅರ್ಧನಾರೀಶ್ವರ, ಚಂದ್ರ ಚೂಡ, ಧವಳಗಿರಿವಾಸ ಮುಂತಾದ ಹೆಸರುಗಳು ಅಂದಿನ ಪ್ರಭಾವಶಾಲಿಗಳಾದ ಲಿಂಗಧಾರಿಮಾನವ ವ್ಯಕ್ತಿಗಳೇ ಇದ್ದಿರಬೇಕೆಂದು ವಿದ್ವಾಂಸರು ತರ್ಕಿಸಿದ್ದಾರೆ. ಸ್ಕಾಂದಪುರಾಣ, ಕಾಳಿಕಾಖಂಡದಲ್ಲಿ (ಅ. ೪) ಉಕ್ತವಾಗಿರುವ—

ಅರ್ಧನಾರೀಶ್ವರಶ್ಚೈವ ಶಂಕರಶ್ಚಂದ್ರಶೇಖರಃ ।
ಗಣಾಧ್ಯಕ್ಷಃ ಪಶುಪತಿಃ ಸರ್ವೇ ತೇ ಲಿಂಗಧಾರಕಾಃ ॥ ೨೪೦ ॥

ಗೌರೀನಾಥ ಉಮಾನಾಥ ಅಂಬಿಕಾ ಪಾರ್ವತೀ ಪತಿಃ ।
ಗಂಗಾಧರೋ ಮಹಾದೇವಃ ಸತತಂ ಲಿಂಗಧಾರಕಾಃ ॥ ೨೪೧ ॥

ತಥಾಗಸ್ತ್ಯಾದಿ ದೂರ್ವಾಸಾ ಮುನಯೋ ನಂದಿಕೇಶ್ವರಃ ।
ಮಹಾಕಾಲೋ ದಧೀಚಿಶ್ಚ ಕಣಾದಃ ಪಾಣಿನಿಸ್ತಥಾ ॥ ೨೫೩ ॥

ಸ್ಕಂದೋ ಭೃಂಗಿರಿಟಿರ್ವೀರಭದ್ರಶ್ಚ ಪ್ರಮದಾದಯಃ ।
ದೇವಾಸುರ ಮನುಷ್ಯಾಶ್ಚ ಸರ್ವೇ ತೇ ಲಿಂಗಧಾರಕಾಃ ॥ ೨೫೪ ॥

---

1. Religion of India (P. 7. A. P. Karamarkar.

ಶ್ಲೋಕಗಳಿಂದ ಪರಶಿವನ ಪಂಚವಿಶಂತಿ ಲೀಲೆಗಳು; ಸ್ಕಂದ, ವೀರಭದ್ರ, ಭೃಂಗಿರಿಟಿ ಮುಂತಾದ ಪ್ರಮಥರೂ ಅಗಸ್ತ್ಯಾದಿ ಮಹರ್ಷಿಗಳೂ ಕೂಡ ಲಿಂಗಧಾರಿಗಳಾಗಿದ್ದು ತಮ್ಮ ಅಮಾನುಷ ಪ್ರಭಾವಗಳಿಂದ ದೇವತಾತ್ವಕ್ಕೇರಿದಂತೆ ಸ್ಪಷ್ಟವಾಗುತ್ತದೆ. ಇಂದಿಗೂ ಪಂಡರಾಪುರದ ವಿಠೋಬ, ತುಳಜಾಪುರದ ಮಹಾಲಕ್ಷ್ಮೀ ಮುಂತಾದ ಶಿಲಾಮೂರ್ತಿಗಳ ಶಿರಸ್ಸುಗಳ ಮೇಲೆ ಅಂಕಿತವಾಗಿರುವ ಲಿಂಗ ಚಿಹ್ನೆಗಳಿಂದ ಅವರೆಲ್ಲರೂ ಲಿಂಗಧಾರಿಗಳಾಗಿ ಮಹಾತ್ಮರಾದ ಮಾನವೋತ್ತಮರೇ ಎಂಬ ಅಂಶವು ಸುಸ್ಪಷ್ಟ.

ಕ್ರಿ. ಶ. ೧೫೦-೨೦೦ರ ಸಮಯದಲ್ಲಿ ಮಧ್ಯ ಭಾರತವನ್ನು ಆಳುತ್ತಿದ್ದ ನಾಗವಂಶಕ್ಕೆ ಸೇರಿದ "ಭಾರಶಿವ" ರಲ್ಲಿ 'ವೀರಸೇನ', ಹಯನಾಗ, ಭರಜನಾಗ ಮುಂತಾದವರು ಲಿಂಗಧಾರಣ ಮಾಡಿಕೊಂಡಿದ್ದ ಬಗ್ಗೆ ಶಾಸನಗಳು ಉಲ್ಲೇಖಿಸಿವೆ. "ಅಂಸಭಾರ ಸನ್ನಿವೇಶಿತ ಶಿವಲಿಂಗೋದ್ವಹನ ಶಿವಸುಖ ಪರಿತುಷ್ಟ ಸಮುತ್ಪಾದಿತರಾಜವಂಶಾನಾಂ" ಎಂದು ಭುಜದ ಮೇಲೆ ಶಿವಲಿಂಗಧಾರಣ ಮಾಡಿರುವುದನ್ನು ಪ್ರಸ್ತಾಪಿಸಿವೆ.[1] ಕಾಶಿಯಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದ ಒಂದು ಮೂರ್ತಿ ಇದ್ದು ಅದರ ಶಿರಸ್ಸಿನಲ್ಲಿ ಶಿವಲಿಂಗಧಾರಣವಿದೆ.[2] ಈ ಮೂರ್ತಿಯು ಕಾಶೀನಾಗರೀ ಪ್ರಚಾರಿಣೀ ಸಭೆಯ ಕಲಾಭವನದಲ್ಲಿದೆ.[3]

ಇನ್ನು ಕ್ರಿ. ಶ. ೩-೫ನೆಯ ಶತಮಾನಗಳವರೆಗೆ ಕಂಚೀ ಪ್ರಾಂತವನ್ನು ಆಳುತ್ತಿದ್ದ ಪಲ್ಲವರಾಜರು ಲಿಂಗಧಾರಿಗಳಾಗಿದ್ದ ಬಗೆಗೆ ಶಾಸನಗಳು ಉಲ್ಲೇಖಿಸಿವೆ. ಮದರಾಸಿಗೆ ಸುಮಾರು ೩೨ ಮೈಲಿ ದೂರದಲ್ಲಿರುವ ಮಾಮಲ್ಲಪುರ, ಸಾಲುಕುಪ್ಪಂ, ಎಂಬಲ್ಲಿ. ಪಲ್ಲವ "ಅತ್ಯಂತಕಾಮ"ನ ಶಾಸನಗಳೂ, ತಿರುಚನಾಪಲ್ಲಿಯಲ್ಲಿ "ಗುಣಭರ"ನ ಶಾಸನವೂ, ಕಂಚಿ, ವಾಯಲೂರು ಗ್ರಾಮಗಳಲ್ಲಿ ರಾಜಸಿಂಹನ ಶಾಸನಗಳೂ ದೊರೆತಿವೆ. ವಾಯಲೂರು ಶಾಸನದಲ್ಲಿ ಪಲ್ಲವ ರಾಜಸಿಂಹನನ್ನು "ಮಹೇಶ್ವರ ಶಿಖಾಮಣಿ ದೀಪ್ತಮೌಲಿಃ" ಎಂದೂ "ಶಿವಚೂಡಾಮಣಿ"

1. ಕಲ್ಯಾಣ ಶಿವಾಂಕ "ಭಾರಶಿವ ವಾಕಾಟಕ ರಾಜವಂಶಗಳ ಇಷ್ಟದೇವರು" ಶ್ರೀ ಶಾರದಾ ಪ್ರಸಾದ್ ಜೀ ಪತನಾ (ಪು. ೫೯೯-೬೦೦).

2. "ವೀರಶೈವ" ೧೯೬೨ ಸೆಪ್ಟೆಂಬರ್ ಸಾ. ಪ. ಭಾ. ೧೩ ಅಂಕ. ೧.

3. ಗಂಗಾಪುರ ತತ್ತ್ವಾಂಕ ಪು. ೬೯. (ಕಲ್ಯಾಣ ಶಿವಾಂಕ) ಶಿವೋಪಾಸನೆಯ ಪ್ರಾಚೀನತೆ).

ಎಂದೂ ವರ್ಣಿಸಲಾಗಿದೆ. ಈತ ಶಿರಸ್ಸಿನಲ್ಲಿ ಲಿಂಗಧಾರಣ ಮಾಡಿದ್ದುದರಿಂದ ಆ ವಿಶೇಷಣವು ಸಾರ್ಥಕವಾಗಿದೆ ಎಂದು ವಿದ್ವಾಂಸರು ತರ್ಕಿಸಿದ್ದಾರೆ. ಈ ಶಾಸನಗಳ ಕಾಲ ಕ್ರಿ. ಶ. ೫೫೦–೫೬೭[1]. ಈ ಪಲ್ಲವರು ಶ್ರೀಶೈಲದಲ್ಲಿ ಮಠ ಕಟ್ಟಿಸಿದಂತೆ ಪಾಲ್ಕುರಿಕೆ ಸೋಮನಾಥನು ತಿಳಿಸಿದ್ದಾನೆ.[2]

ಕ್ರಿ. ಶ. ೧ನೆಯ ಶತಮಾನದಲ್ಲಿಯೇ ಶ್ರೀಶೈಲದಲ್ಲಿ ಶೈವಮಠವೊಂದು ಇದ್ದ ಬಗೆಗೆ ವಿದ್ವಾಂಸರು ಚರ್ಚಿಸಿದ್ದಾರೆ. ಚೀನಾದೇಶದ ಯಾತ್ರಿಕರಲ್ಲಿ ಒಬ್ಬನಾದ ಫಾಹಿಯಾನ್ (ಕ್ರಿ. ಶ. ೪೦೫) ಶ್ರೀಶೈಲದ ಮೇಲೆ 'ಪಾರಾವತ' ಎಂಬ ಹೆಸರಿನ ಮಠವಿದ್ದುದಾಗಿ ಉಲ್ಲೇಖಿಸಿದ್ದಾನೆ.[3]

ಸ್ಕಾಂದಪುರಾಣಾಂತರ್ಗತ ಶಂಕರ ಸಂಹಿತೆಯಲ್ಲಿ ಉಕ್ತವಾಗಿರುವ ಸದಾನಂದ ಶಿವಾಚಾರ್ಯರು "ಲಿಂಗಾಂಗ ಸಂಬಂಧಿ"ಯೂ "ಜಗದ್ಗುರು"ವೂ ಆಗಿದ್ದ ಬಗ್ಗೆ ಉಲ್ಲೇಖವಿದೆ.[4] ಕ್ರಿ. ಶ. ಸು. ೬ನೆಯ ಶತಮಾನದವನೆಂದ ತಿಳಿದು ಬಂದಿರುವ ನಂದಿಕೇಶ್ವರನ 'ಅಭಿನಯ ದರ್ಪಣ'ದಲ್ಲಿ ಎಡಹಸ್ತದಲ್ಲಿ ಶಿವಲಿಂಗವನ್ನಿಟ್ಟು ಪೂಜಿಸುತ್ತಿದ್ದ "ಲಿಂಗಸಂತ" ಸಂಸ್ಕೃತಿಯನ್ನು ಸೂಚಿಸುವ "ಶಿವಲಿಂಗಹಸ್ತ" ಎಂಬ ಹಸ್ತಾಭಿನಯವನ್ನು ಉಲ್ಲೇಖಿಸಲಾಗಿದೆ. "ವಾಮೋರ್ಧ್ವಹಸ್ತೇ ವಿನ್ಯಸ್ತ ಶಿಖರಃ ಶಿವಲಿಂಗಕಃ" ಎಂಬ ಸೂತ್ರದಲ್ಲಿ ಎಡಹಸ್ತದಲ್ಲಿ ಶಿಖರ (ಬಲಗೈಯ ಮುಷ್ಟಿ) ಹಸ್ತವನ್ನಿಡುವುದರ ಮೂಲಕ "ಹಸ್ತಪೀಠಲಿಂಗಾರ್ಚನೆ"ಯನ್ನು ಪ್ರತಿಬಿಂಬಿಸಲಾಗಿದೆ. ಇದು ಸ್ಕಾಂದಪುರಾಣ (ಶಂಕರ ಸಂಹಿತೆ) ದಲ್ಲಿ ಬರುವ

---

1. South Indian Inscriptions vol. No. ೩೩-೩೪. (೧೮೯೦) Epigraphia India vol. XVIII.

2. ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರ–ಕರ್ಮಹರೇಶ್ವರ ಮಹಿಮೆ.

3. ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರ ಪೀಠಿಕ. (ಪು. ೩೪೪)–ಡಾ॥ ಚಲಿಕೂರಿ ನಾರಾಯಣರಾವ್.

.4 ಆಂಧ್ರುಲ ಚರಿತ್ರ. ಭಾ. 1. ಪು. ೧೫೦.

5. ತಸ್ಮಿನ್ ಶ್ರೀಪರ್ವತೇ ಪುಣ್ಯೇ ಸಂಸಾರಾಮಯಭೇಷಜೇ ।
ಆಸ್ತೇ ಲಿಂಗಾಂಗಸಂಬಂಧೀ ಸದಾನಂದಾಹ್ವಯೋ ಮುನಿಃ ॥ ೯೨ ॥
ಅತಿವರ್ಣಾಶ್ರಮೀ ಯೋಗೀ ಜೀವನ್ಮುಕ್ತೋ ಜಗದ್ಗುರುಃ ॥ ೯೩ ॥

ಹಸ್ತಪೀಠಾರ್ಚನೆಯನ್ನು ನಿದರ್ಶಿಸುತ್ತದೆ.[1]

ಇನ್ನು ಕ್ರಿ. ಶ. ೮ನೇ ಶತಮಾನದಲ್ಲಿದ್ದರೆಂದು ಹೇಳಲಾಗಿರುವ ಆಚಾರ್ಯ ಶ್ರೀ ಶಂಕರರ ಕಾಲದಲ್ಲಿ ಭುಜ ಮತ್ತು ಶಿರಸ್ಸುಗಳಲ್ಲಿ ಶಿವಲಿಂಗಧಾರಣ ಮಾಡುತ್ತಿದ್ದ ಜಂಗಮರ ಅಸ್ತಿತ್ವವನ್ನು ಆನಂದಗಿರಿ ಉಲ್ಲೇಖಿಸಿದ್ದಾನೆ. ಪ್ರಾಯಃ ಅದೇ ಸಮಯದಲ್ಲಿ ಗೋಕರ್ಣದಲ್ಲಿ ಆಚಾರ್ಯ ಶಂಕರರನ್ನು ವಾದದಲ್ಲಿ ಎದುರಿಸಿದ ಬ್ರಹ್ಮಸೂತ್ರ ಶಿವಸೂತ್ರಗಳ ಭಾಷ್ಯಕರ್ತೃ ಶ್ರೀ ನಿಲಕಂಠ ಶಿವಾಚಾರ್ಯರು, ಶಿಷ್ಯ ಹರದತ್ತಾಚಾರ್ಯರು ಮಾಧವಾಚಾರ್ಯ ಕೃತ ಶಂಕರ ದಿಗ್ವಿಜಯದಲ್ಲಿ ಕಂಡಿದ್ದಾರೆ. ಈ ನೀಲಕಂಠ ಶಿವಾಚಾರ್ಯರು ಬರೆದಿದ್ದ ನೀಲಕಂಠ ಭಾಷ್ಯವನ್ನು ಅಧಿಕರಿಸಿ, ಅದಕ್ಕೆ ಕಾರಿಕಾರೂಪವಾಗಿ ತಾನು ವ್ಯಾಖ್ಯಾನಿಸಿರುವ ಅಂಶವನ್ನು ಕ್ರಿಯಾಸಾರ ಕರ್ತೃ ನೀಲಕಂಠನು (೧೪೦೦)

ನೀಲಕಂಠಶಿವಾಚಾರ್ಯ ನಾಮ್ನಾ ಭಾಷ್ಯಮಚೀಕರತ್ ।
ವಿಶಿಷ್ಟಾದ್ವೈತ ಸಿದ್ಧಾಂತ ಪ್ರತಿಪಾದನಮುತ್ತಮಮ್ ॥
ಮಯಾಪಿ ತಸ್ಯ ತಾತ್ಪರ್ಯಂ ಶ್ರೋತೄಣಾಂ ಸಂಬುದ್ಧಯೇ ।
ಕಾರಿಕಾರೂಪತಃ ಸರ್ವಂ ಕ್ರಮೇಣೈವ ನಿಬಧ್ಯತೇ ॥

(—ಉ. ೧-೩೨-೩೩)

ಎಂದು ಸ್ಪಷ್ಟಪಡಿಸಿದ್ದಾನೆ.

ಇನ್ನು ಕ್ರಿ. ಶ. ೯೪೦-೧೧೫೦ ರಲ್ಲಿದ್ದನೆಂದು ಊಹಿಸ್ಪಟ್ಟಿರುವ ಹೈಹಯ ವಂಶದ ನನ್ನಚೋಡನು ತನ್ನ ಗುರು ಎಂದು ಕೊಂಡಾಡಿರುವ ಶ್ರೀಶೈಲ ಕ್ಷೇತ್ರವಾಸಿ ಜಂಗಮಲ್ಲಿಕಾರ್ಜುನ ಶಿವಯೋಗಿ, ಮತ್ತು ಶ್ರೀಶೈಲದಲ್ಲಿ ಕ್ರಿ. ಶ. ೧೦೫೦ರ ಸುಮಾರಿನಲ್ಲಿದ್ದ ದೇವರದಾಸಿಮಾರ್ಯರ ದೀಕ್ಷಾಗುರು ಚಂದ್ರಗುಂಡದೇಶಿಕೇಂದ್ರ, ಗುರು ವಿರೂಪಾಕ್ಷದೇಶಿಕೇಂದ್ರ (ಕ್ರಿ. ೧೦೦೦) ಶ್ರೀ ಪತಿಪಂಡಿತಾರಾಧ್ಯ (ಕ್ರಿ. ಶ. ೧೦೬೦) ಮುಂತಾದವರು ಹನ್ನೊಂದನೆಯ ಶತಮಾನದಲ್ಲಿ ಲಿಂಗಧಾರಣ ಸಿದ್ಧಾಂತವನ್ನು ಕುರಿತು ಭಾಷ್ಯಾದಿಗಳನ್ನು ಬರೆದಿದ್ದುದು ಸುಪ್ರಸಿದ್ಧವಾಗಿಯೇ ಇದೆ.

---

1 " ಯೋ ಹಸ್ತಪೀಠೇ ನಿಜಲಿಂಗಮಿಷ್ಟಂ ವಿನ್ಯಸ್ಯ ತಲ್ಲೀನಮನಃ ಪ್ರಚಾರಃ

(—ಸ್ಕಾಂದ ಶಂ. ಸಂಹಿತಾ ಕಾಳಿಕಾಕಾಂಡ)

## ಸಾರೂಪ್ಯಮುಕ್ತಿ ಸ್ವರೂಪ

ಶ್ರೀಕಂಠ ಮತದಲ್ಲಿ ಸಾರೂಪ್ಯ ಮುಕ್ತಿಯನ್ನು ಒಪ್ಪಲಾಗಿದೆ ಎಂದು ಹೇಳಿಯಾಯಿತು. ಸಾರೂಪ್ಯ ಎಂದರೆ ಸಾದೃಶ್ಯ. ಆ ಭಾಗವನ್ನು ಅವರು ಹೀಗೆ ಸಮರ್ಥಿಸಿದ್ದಾರೆ. "ಮುಕ್ತಸ್ಯ ಬ್ರಹ್ಮಣಾ ಸಾದೃಶ್ಯಮಸ್ತಿ. ಕುತಃ? 'ನಿರಂಜನಃ ಪರಮಂ ಸಾಮ್ಯಮುಪೈತಿ" (ಮುಂ. ೩. ೩.)' ಮುಕ್ತಃ ಶಿವಸಮೋ ಭವೇತ್' ಇತಿ ಮುಕ್ತಸ್ಯ ಬ್ರಹ್ಮಗುಣ ಸ್ವರೂಪಾವಿಭಾಗೇನ ಬ್ರಹ್ಮಸದೃಶತಯಾ ದೃಷ್ಟತ್ವಾತ್" ಎಂದರೆ 'ಮುಕ್ತನು ಪರಶಿವನ ಸಾದೃಶ್ಯವನ್ನು ಪಡೆಯುತ್ತಾನೆ'. 'ಮುಕ್ತನು ಶಿವನಿಗೆ ಸಮ' ನಾಗುತ್ತಾನೆ. ಎಂಬ ಶ್ರುತಿ. ಆಗಮ ವಾಕ್ಯಗಳಲ್ಲಿ ಮುಕ್ತನಿಗೆ ಬ್ರಹ್ಮಗುಣಸ್ವರೂಪವು ಅವಿಭಾಗ ಅರ್ಥಾತ್ 'ಬ್ರಹ್ಮಸಾದೃಶ್ಯ'ವೇ ಮುಕ್ತಿ. (ಬ್ರಂ ಸೂ. ಅವಿಭಾಗಾಧಿಕರಣ ೪. ೪. ೨. ೪.).

ಕ್ರಿಯಾಸಾರದಲ್ಲಿಯೂ ಮುಕ್ತಿಯು ಸಾರೂಪ್ಯವೆಂದು ಹೇಳಿದೆಯಾದರೂ ಅದು ಸಾಮರಸ್ಯಾತ್ಮಕ ಮುಕ್ತಿ.

ಅಮೃತಸ್ಯೇತಿ ವಾಕ್ಯೇನ ಧಾರಣಂ ಪ್ರತಿಪಾದಿತಂ ।
ತನ್ನಿಷ್ಠಾ ಏವ ಮನುಜಾ ಅತಿವರ್ಣಾಶ್ರಮೇ ರತಾಃ ॥ ೧೮೧ ॥
ತ ಏವ ಹಿ ಮಹಾತ್ಮಾನೋ ಬ್ರಹ್ಮನಿಷ್ಠಾ ಉದಾಹೃತಾಃ ।
ಲಿಂಗಾಂಗಸಾಮರಸ್ಯೇನ ಬ್ರಹ್ಮಭಾವಮುಪಾಶ್ರಿತಾಃ ॥ ೧೮೨ ॥
ಸಾರೂಪ್ಯರೂಪಿಣೀಂ ಮುಕ್ತಿಂ ಸಂಪ್ರಾಪ್ಯ ಪರದುರ್ಲಭಾಂ ।
ಕೃತಕೃತ್ಯಾ ಭವಂತ್ಯೇವ ಶಿವಾನಂದಭುಜೋಽನಿಶಂ ॥ ೧೮೩ ॥

(ಕ್ರಿಯಾಸಾರ ಉ. ೧)

"ತೈತ್ತರೀಯೋಪನಿಷತ್ತಿನಲ್ಲಿ" ಅಮೃತಸ್ಯ ದೇವಧಾರಣೋ ಭೂಯಾಸಂ ಎಂಬ ಶ್ರುತಿ ಮುಕ್ತಿಗಾಗಿ ಶಿವಲಿಂಗಧಾರಣ ಮಾಡಿಕೊಳ್ಳಬೇಕು. ಎಂದು ವಿಧಿಸಿದೆ. ಅಂಥ ಲಿಂಗನಿಷ್ಠೆಯುಳ್ಳವರು ಅತಿವರ್ಣಾಶ್ರಮಿಗಳು; ಅವರೇ ಮಹಾತ್ಮರು, ಅವರೇ ಬ್ರಹ್ಮನಿಷ್ಠರು, ಅವರು ಲಿಂಗಾಂಗಸಾಮರಸ್ಯದಿಂದ ಬ್ರಹ್ಮಭಾವದಲ್ಲಿರುತ್ತಾರೆ. ಇದು ಇತರರಿಗೆ ದೊರೆಯದ ಸಾರೂಪ್ಯಮುಕ್ತಿ. ಅವರು ನಿರಂತರವೂ ಶಿವಾನಂದವನ್ನು ಅನುಭವಿಸುತ್ತಾರೆ". ಎಂಬ ವಿವರಣವೆ ಕ್ರಿಯಾಸಾರವು ಸೂಚಿಸಿರುವ ಮುಕ್ತಿ. ಇದು ಲಿಂಗಾಂಗಸಾಮರಸ್ಯಾತ್ಮಕ ಸಾರೂಪ್ಯ.

ಮುಂದೆ 'ಭೋಗಮಾತ್ರ ಸಾಮ್ಯಲಿಂಗಾಚ್ಚ' (೪. ೪. ೬-೨೧) ಎಂಬ ಸೂತ್ರ ಕಾರಿಕೆಯಲ್ಲಿ—

ತಥಾ ವಿದ್ವಾನ್ ಪುಣ್ಯಪಾಪೇ ವಿಧೂಯಾಥ ನಿರಂಜನಃ ।
ಉಪೈತಿ ಪರಮಂ ಸಾಮ್ಯಮಿತಿ ತತ್ಸಾಮ್ಯಮೀರಿತಂ ॥ ೨೫೭ ॥

ಎಂಬಲ್ಲಿರುವ 'ಪರಮಸಾಮ್ಯ'ವೂ ಸಹ ಮೇಲೆ ಹೇಳಿದ ಸಾಮರಸ್ಯಾತ್ಮಕ ಸಾರೂಪ್ಯವೇ ಹೊರತು ಭೇದದ್ಯೋತಕವಾದ ಕೇವಲ ಸಾಮ್ಯವಲ್ಲ. ಆದ್ದರಿಂದಲೇ "ಪರಮ" ಪದವು ಸಾರ್ಥಕವಾಗುತ್ತದೆ. ಇದೇ ವಿಷಯವನ್ನು ಉಲ್ಲೇಖಿಸಿರುವ ಶ್ರೀಕರಭಾಷ್ಯವು "ಮುಕ್ತೋಪಸೃಪ್ಯವ್ಯಪದೇಶಾತ್ (ಬ್ರಂ. ೧. ೩. ೨.) ಎಂಬಲ್ಲಿ "ಪರಮಂ ಸಾಮ್ಯಮುಪೈತೀತ್ಯತ್ರ ಪರಮಶಿವೋಪಾಸಕಾನಾಂ ಶಿವ ಸಾರೂಪ್ಯಮುದ್ದಿಶ್ಯ" ಎಂದು ಆರಂಭಿಸಿ "ನಿರತಿಶಯಾನಂದಸ್ವರೂಪಾ ತತ್ಸಮಾನ ಗುಣಸಾರಾ ಕೈವಲ್ಯಲಕ್ಷ್ಮೀಪ್ರಾಪ್ತಿರೂಪಮುಕ್ತಿಃ" ಎಂದರೆ ಪರಮ ಶಿವೋಪಾಸ ಕರಿಗೆ ಲಭಿಸುವ ಸಾರೂಪ್ಯವೆಂದರೆ ನಿರತಿಶಯವಾದ ಆನಂದ ಸ್ವರೂಪವೂ ಶಿವಾನಂದಸಮಾನಗುಣಸಾರವೂ ಆದ ಕೈವಲ್ಯಲಕ್ಷ್ಮೀಯೇ; ಅರ್ಥಾತ್ ಅದು ಶಿವಸಾಮರಸ್ಯಾತ್ಮಕವೇ ಹೊರತು ಶ್ರೀಕಂಠರು ಹೇಳುವ 'ಮುಕ್ತಿಯ ಅವಸ್ಥೆ ಯಲ್ಲಿಯೂ ಭೇದವನ್ನೇ ಸೂಚಿಸುವ ಸಾದೃಶ್ಯಾತ್ಮಕ ಸಾರೂಪ್ಯ'ವಲ್ಲ.

ರಾಮಾನುಜೀಯರಲ್ಲಿ ಉಕ್ತವಾಗಿರುವ ಸಾರೂಪ್ಯವು ಮುಕ್ತನಿಗೆ ಲಕ್ಷ್ಮೀ ವಲ್ಲಭತ್ವಾದಿಗಳ ಹೊರತು ವಿಷ್ಣುವಿನಂತೆ ಶಂಖಚಕ್ರಾದಿಧರತ್ವ ರೂಪವಾದ ತದ್ರೂಪಪ್ರಾಪ್ತಿರೂಪ ಸಾರೂಪ್ಯ. ಅದರಂತೆ ಶ್ರೀಕಂಠರೂ ಗೌರೀವಲ್ಲಭತ್ವಾದಿ ಧರ್ಮವಿಲ್ಲದ ಶಿವಸಾರೂಪ್ಯ; ಎಂದರೆ ಶಿವನಂತೆ ತ್ರಿನೇತ್ರತ್ವ, ಚಂದ್ರಧರತ್ವಾದಿರೂಪ; ಪ್ರಮಥರಿಗೆ ಲಭಿಸಿರುವಂತಹ ಶಿವರೂಪಪ್ರಾಪ್ತಿ ರೂಪ ಸಾರೂಪ್ಯ. ಇದನ್ನೇ ಶ್ರೀಕಂಠರು "ಆತ್ಮೇತಿತೂಪಗಚ್ಛಂತಿ ಗ್ರಾಹಯಂತಿ ಚ" (ಬ್ರಂ. ೪. ೧. ೩) ಎಂಬ ಸೂತ್ರ ಭಾಷ್ಯದ ಕಡೆಯಲ್ಲಿ ಉಪಾಸಕನಿಗೆ "ತ್ವಂ ವಾ ಅಹಮಸ್ಮಿ ಭಗವೋ ದೇವತೇ ಅಹಂ ವೈ ತ್ವಮಸಿ" ಉಪಾಸಕನಿಗೆ ಬ್ರಹ್ಮವು ಅನುಗ್ರಹಿಸುವ ಪ್ರಸಾದವಿಷ್ಟೆ! 'ನೀನೇ ನಾನು; ಅಥವಾ ನಾನೇ ನೀನು' ಎಂಬ ಭಾವ. ಎಂದರೆ ಒಬ್ಬರಾಜ ತನ್ನ ಆಪ್ತಸೇವಕನ ಮೇಲೆ ಪೂರ್ಣಕೃಪಾದೃಷ್ಟಿಯಿಟ್ಟು ತನ್ನ ಉಡುಪನ್ನು ಅವನಿಗೆ ಧರಿಸಿ ಕೆಲವು ವಿಷಯಗಳಲ್ಲಿ ಮಾತ್ರ "ತಾನೇ ಅವನು, ಅವನೇ ತಾನು. ಅವನು ಮಾಡಿದ ಆಜ್ಞೆ ತಾನು ಮಾಡಿದಂತೆಯೇ!" ಎಂದು

ಎಂಬುವಷ್ಟು ಮಟ್ಟಿಗೆ ಅಧಿಕಾರ ನೀಡುವಿಕೆ. ಮುಂದೆ "ನಿರತಿಶಯ ಸ್ವರೂಪಾನಂದ ಸಾಕ್ಷಿ ಸ್ವಪ್ರಕಾಶ ಶಿವರೂಪ ಪರಾಹಂಭಾವಾಪತ್ತಿರ್ಮುಕ್ತಿಃ" ಎಂದರೆ ನಿರತಿಶಯವಾದ ಸ್ವರೂಪಾನಂದಕ್ಕೆ ಸಾಕ್ಷಿಭೂತವಾದ ಸ್ವಪ್ರಕಾಶ ಶಿವರೂಪದ ಪರಾಹಂಭಾವ". ಶ್ರೀಕಂಠ ಮತದಲ್ಲಿ ಶಿವರೂಪಸ್ರಾಪ್ತಿಯೇ ಮುಕ್ತಿ". ಪರಂ ಬ್ರಹ್ಮ ಚ ತಾದೃಗೇವ ತದ್ಭಾವನಯಾ ಉಪಾಸಕಶ್ಚ ತಥೈವ ಭವತಿ" ಎಂಬ ಭೇದ ದ್ಯೋತಕ ಔಪಮ್ಯವೇ ಸಾಧಿಸಲ್ಪಟ್ಟಿದೆ.

ಈ ಸೂತ್ರದ ಶ್ರೀಕರಭಾಷ್ಯದಲ್ಲಿ "ನಿರತಿಶಯ ಪರಮಾನಂದ ಚಿದಚಿತ್ರ ಪಂಚವಿಲಕ್ಷಣ ಶಿವತತ್ತ್ವಪ್ರಾಪ್ತಿರೇವ ಮೋಕ್ಷಃ" ಎಂದರೆ ನಿರತಿಶಯ ಪರಮಾನಂದರೂಪವೂ ಚಿದಚಿತ್ ಪ್ರಪಂಚವಿಲಕ್ಷಣವೂ ಆದ ಶಿವತ್ವಪ್ರಾಪ್ತಿ. ಅರ್ಥಾತ್ ಸಾಮರಸ್ಯವೇ ಮುಕ್ತಿ" ಎಂದು ವೀರಶೈವ ಸಿದ್ಧಾಂತ ಸಿದ್ಧವಾದ ಸಾಮರಸ್ಯಾತ್ಮಕ ಮೋಕ್ಷವನ್ನು ಸೂಚಿಸಿದೆ. ಶಿವರೂಪ ಪ್ರಾಪ್ತಿ-ಶಿವತ್ವ ಪ್ರಾಪ್ತಿಗಳಿಗಿರುವ ಅಂತರವು ಇಲ್ಲಿ ಸ್ಪಷ್ಟವಾಗಿಯೇ ಇದೆ. ಆದ್ದರಿಂದಲೇ ಶ್ರೀಪತಿ ಪಂಡಿತರು ಶ್ರೀಕಂಠರು ಹೇಳುವ "ವಿಶಿಷ್ಟಾದ್ವೈತ" ಎಂಬ ಪದವನ್ನೂ ಒಪ್ಪುವುದಿಲ್ಲ. 'ವಿಶಿಷ್ಟಾದ್ವೈತಮಿತ್ಯುಕ್ತಿ ವಿರೋಧಾತ್, ವಿಶಿಷ್ಟಸ್ಯ ದುರ್ನಿರೂಪ್ಯತ್ವೇನ ಮಿಥ್ಯಾತ್ವಾಚ್ಚ ಶಿವಾದ್ವೈತಮೇವ ಗ್ರಾಹ್ಯಂ" ಎಂದು "ವಿಶಿಷ್ಟಾದ್ವೈತ"ವನ್ನು ನಿರಾಕರಿಸಿದ್ದಾರೆ. ಕ್ರಿಯಾಸಾರವು "ವಿಶಿಷ್ಟಾದ್ವೈತ" ಮತ್ತು "ಸಾರೂಪ್ಯ" ಪದಗಳನ್ನು ಬಳಸಿದೆಯಾದರೂ ಅದರ ವ್ಯುತ್ಪತ್ತಿ ಕ್ರಮವು ವೀರಶೈವ ಸಿದ್ಧಾಂತಾನುಗುಣವಾಗಿಯೇ ಇದೆ.

ಅಲ್ಲದೆ ಶ್ರೀ ಪತಿಪಂಡಿತರು "ಅನಾವೃತ್ತಿಶ್ಶಬ್ದಾತ್" ಎಂಬ ಕಡೆಯ ಸೂತ್ರಭಾಷ್ಯದಲ್ಲಿ "ಲೋಹರಸನ್ಯಾಯಾದಿವತ್ ಪರಮೇಶ್ವರೋಪಾಸಕಾನಾಂ ತದುಪಾಸನಾಮಹಿಮ್ನಾ ಸ್ವಾಭಾವಿಕ ಜೀವಭಾವ ನಿವೃತ್ತಿಪೂರ್ವಕ ಶಿವತ್ವ ಪ್ರಾಪ್ತಿರೇವ ಮೋಕ್ಷಃ" ಎಂದು ಸ್ಪಷ್ಟಪಡಿಸಿದ್ದಾರೆ.

## ಜಗದ್ವ್ಯಾಪಾರವರ್ಜ್ಯ ವಿಚಾರ

ವೀರಶೈವ ಸಿದ್ಧಾಂತದ ಪ್ರಕಾರ ಮುಕ್ತನಿಗೆ ಶಿವಸಾಮರಸ್ಯವನ್ನು ಒಪ್ಪಿದರೆ ಜೀವನು ಸಾಕ್ಷಾತ್ ಶಿವನೇ ಆಗುವುದರಿಂದ ಈತನಿಗೆ ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರ-ತಿರೋಧಾನ ಮತ್ತು ಅನುಗ್ರಹ ಎಂಬ ಪ್ರಪಂಚ ಕೃತ್ಯಗಳ ಅಧಿಕಾರವೂ

ಉಂಟೇ ? ಎಂಬ ಸಂದೇಹವು ಮೂಡುತ್ತದೆ. ಆದರೆ ಬ್ರಹ್ಮಸೂತ್ರಕಾರರು ಮುಕ್ತನಿಗೆ "ಜಗದ್ವ್ಯಾಪಾರಾಧಿಕಾರವಿಲ್ಲ" (ಬ್ರಂ. ಸು. ೪. ೪) ಎಂದು ತೀರ್ಮಾನಿಸಿರುವುದರಿಂದ ವೀರಶೈವವೂ ಅದಕ್ಕೆ ಹೊರತಾಗುವುದಿಲ್ಲ. ಏಕೆಂದರೆ ಮುಕ್ತನಿಗೆ ಅಗತ್ಯವಾದದ್ದು ನಿರತಿಶಯಶಿವಾನಂದ. ಅವನಿಗೆ ಜಗದ್ವ್ಯಾಪಾರದ ಗೊಡವೆ ಏಕೆ ?

ಶ್ರುತಿಯಲ್ಲಿ "ನದೀಸಮುದ್ರ ನ್ಯಾಯದ ಉಪಮಾನವನ್ನು ಮುಕ್ತಿಗೆ ನೀಡಿರುವುದರಿಂದಲೂ, ಆಚಾರ್ಯರು "ಜಲೇ ಜಲಮಿವ, ವಹ್ನೌ ವಹ್ನಿರಿವ" ಎಂದು ಹೇಳಿರುವುದರಿಂದಲೂ ಮುಕ್ತನು ಶಿವನಲ್ಲಿ ಅವಿರಳಸಾಯುಜ್ಯವನ್ನು ಹೊಂದುತ್ತಾನೆ. ಆಗ ಜಗದ್ವ್ಯಾಪಾರವೂ ಅವನಿಗೆ ಬಂತಲ್ಲವೆ ? ಎಂಬ ಶಂಕೆಗೆ ಉತ್ತರವು ಅಲ್ಲಿ ಸಿದ್ಧವಾಗಿಯೇ ಇದೆ.

ನಾನಾ ಕಡೆಗಳಿಂದ ಬೇರೆ ಬೇರೆ ನಾಮ-ರೂಪು-ರುಚಿಗಳುಳ್ಳ ನದಿಗಳು ಹರಿದು ಬಂದು ಸಮುದ್ರವನ್ನು ಹೊಕ್ಕು ತಮ್ಮ ತಮ್ಮ ನಾಮರೂಪಾದಿಗಳನ್ನು ಕಳೆದುಕೊಂಡು ನೀರು ನೀರಿನಲ್ಲಿ ಬೆರೆದು ಒಂದಾಗುವುದು ದಿಟ. ಆದರೂ ಆ ನೀರಿನಲ್ಲಿಯೂ ಎರಡು ಭಾಗಗಳು ಸ್ಪಷ್ಟವಾಗಿಯೇ ಇವೆ. ಎಂದರೆ ಸಮುದ್ರವನ್ನು ಸೇರಿದ ನದಿಗಳ ನೀರು ಸಮುದ್ರ ಹೊಕ್ಕರೂ ಸಮುದ್ರದ ಮೇಲ್ಪದರದ ನೀರು (Surface of the water) ಮಾತ್ರ ರವಿರಸ್ಮಿಗೆ ಸಿಕ್ಕಿ ಆವಿಯಾಗಿ ಮೇಲೇರಿ, ಮೋಡವಾಗಿ ಮಳೆಸುರಿದು ಮತ್ತೆ ಮತ್ತೆ ಸಮುದ್ರವನ್ನು ಸೇರುವುದೇ ಹೊರತು ಸಮುದ್ರದ ತತ್ತಳದಲ್ಲಿರುವ ಜಲಾಂಶವು ಎಂದೆಂದಿಗೂ ರವಿರಸ್ಮಿಗೆ ಸಿಗದೆ ಪರಮ ಶೀತಲವನ್ನೇ ಹೊಂದಿರುತ್ತದೆ. ಅದರಂತೆ ಮುಕ್ತಾತ್ಮರೂ ಸಹ ಭವಿಜೀವಿಗಳಂತೆ ಪುನಃ ಪುನಃ ಜನನ ಮರಣಗಳಿಗೆ ಬಲಿಯಾಗದೆ ಕಡಲಿನ ತತ್ತಳ ಜಲದಂತೆ ಜಗದ್ವ್ಯಾಪಾರದ ಜಂಜಾಟವಿಲ್ಲದೆ ಕೇವಲ ಆನಂದಾತ್ಮಕ ವಿಭಾಗದಲ್ಲಿ ನಿತ್ಯ ಸುಖವನ್ನು ಅನುಭವಿಸುತ್ತಾರೆ. ಜಗದ್ವ್ಯಾಪಾರದ ಹೊಣೆ ಪರಮಾತ್ಮನದು. ಅದರಿಂದಲೇ ಅವನಿಗೆ ಶಕ್ತಿಯ ನೆರವು ಅಗತ್ಯ. ಮುಕ್ತನಿಗೆ ಜಗದ್ವ್ಯಾಪಾರದ ಹೊಣೆಯೇ ಇಲ್ಲದ್ದರಿಂದ ಗೌರೀವಲ್ಲಭತ್ವದ ಪ್ರಶ್ನೆಯೇ ಏಳುವುದಿಲ್ಲ !

ಹಾಗಾದರೆ ಪರಮಾತ್ಮನಲ್ಲಿಯೂ ಕೂಡ ಜಗದ್ವ್ಯಾಪಾರ ವಿಭಾಗ ಮತ್ತು ಅದಿಲ್ಲದ ವಿಭಾಗವೆಂಬುದು ಉಂಟೆ ? ಎಂಬ ಶಂಕೆಗೆ ಶ್ರುತಿ ಸಮಾಧಾನ ಹೇಳಿದೆ.

"ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ" (ಪುರುಷಸೂಕ್ತ) ಎಂದರೆ ಪರಮಾತ್ಮನು ತನ್ನ ಅನುಪಮ ವೈಭವದ ಪಾದ (ನಾಲ್ಕನೇ ಒಂದು ಅಂಶ) ಭಾಗವನ್ನು ಜಗದ್ವ್ಯಾಪಾರಕ್ಕೆ ಬಳಸಿಕೊಂಡು ಅದರಿಂದ ಜಗತ್ತಿನ ಸೃಷ್ಟಿ ಸ್ಥಿತಿ ಮುಂತಾದ ಪಂಚ ಕೃತ್ಯಗಳನ್ನು ನೆರವೇರಿಸುತ್ತಾನೆ. ಉಳಿದ ಮೂರು ಭಾಗ (ಮುಕ್ಕಾಲು) ವನ್ನು ತನ್ನಲ್ಲಿ 'ಅಮೃತಂ ದಿವಿ' ಮೀಸಲು ಮಾಡಿರುತ್ತಾನೆ. ಹೇಗೆ ಒಬ್ಬ ಶ್ರೀಮಂತನು ತನ್ನ ಸಂಪತ್ತಿನ ನಾಲ್ಕನೇ ಒಂದಂಶವನ್ನು ತನ್ನ ವ್ಯವಹಾರಕ್ಕೆ ಬಳಸಿಕೊಂಡು ಉಳಿದ ಮೂರು ಭಾಗವನ್ನು ಮೀಸಲಾಗಿ (Reserve Fund) ಇಟ್ಟಿರುವನೋ ಅದರಂತೆ. ಹಾಗೆ ಇಲ್ಲಿಯೂ ಮುಕ್ತಾತ್ಮರು ಜಗದ್ವ್ಯಾಪಾರ ಜಂಜಡಕ್ಕೆ ಸಿಲುಕದೆ, ಅವರು ನಿತ್ಯಾನಂದಕರವಾದ ಮೀಸಲ ಭಾಗವನ್ನು ಹೊಂದಿ ಸುಖಿಸುವುದರಿಂದ ಅವರಿಗೆ ಜಗದ್ವ್ಯಾಪಾರದ ಹೊಣೆಯಿಲ್ಲ.



# ನಂದಿಕೇಶ್ವರನ ಶಕ್ತಿವಿಶಿಷ್ಟಾದ್ವೈತ ದರ್ಶನ

ಶೈವ ಸಿದ್ಧಾಂತಕ್ಕೆ ಮೂಲ ಶಿವನಿಂದ ಪೃಥಿವಿಯವರೆಗಿನ ಮೂವತ್ತಾರು ತತ್ತ್ವಗಳು. ಇವುಗಳ ಕಲ್ಪನೆ ಮೊದಲು ಕಂಡುದು ನಂದಿಕೇಶ್ವರನು ಮಾಹೇಶ್ವರ ಸೂತ್ರಗಳಿಗೆ ಬರೆದಿರುವ ಕಾರಿಕೆಗಳಲ್ಲಿ ಎಂದು ಹಿಂದೆಯೇ ಹೇಳಿದೆ. ಈ ದಿಶೆಯಲ್ಲಿ ಪರಂಪರೆಯಿಂದ ಬಂದ ಒಂದು ಐತಿಹ್ಯವುಂಟು.

ನಂದಿಕೇಶ್ವರ ಪರಶಿವನ ಪ್ರಮಥರಲ್ಲಿ ಮೊದಲನೆಯವ. ನಂದಿ, ವ್ಯಾಘ್ರ ಪಾದ, ಸನಕ ಮುಂತಾದ ಸಿದ್ಧರು ಶಿವಾಜ್ಞಾರೂಪವಾದ ವೇದಗಳ ರಹಸ್ಯವನ್ನು ಅರಿಯಲು ಶಿವನ ಮೊರೆ ಹೊಕ್ಕರು. ಅವರ ಇಂಗಿತವನ್ನು ಅರಿತ ಪರಮೇಶ್ವರ ಒಂದು ದಿನ ತನ್ನ ನೃತ್ಯದ ಕಡೆಯಲ್ಲಿ ಡಮರುಗವನ್ನು ಹದಿನಾಲ್ಕು ಸಲ ಬಾರಿಸಿದ. ಆ ಡಮರುಗದಿಂದ ಹೊರಬಿದ್ದ ಅಕ್ಷರ ಸಮಾಮ್ನಾಯವೇ ಮುಂದೆ ಕಾಣಿಸಿರುವ ಹದಿನಾಲ್ಕು ಸೂತ್ರಗಳು :—

ಅ ಇ ಉ (ಣ್), ಋ ಲೃ (ಕ್), ಏ ಓ (ಙ್), ಐ ಔ (ಚ್), ಹ ಯ ವ ರ (ಟ್), ಲ (ಣ್), ಞ ಮ ಙ ಣ ನ (ಮ್) ಝ ಭ (ಞ್), ಘ ಢ ಧ (ಷ್), ಜ ಬ ಗ ಡ ದ (ಶ್), ಖ ಫ ಛ ಠ ಥ ಚ ಟ ತ (ವ್), ಕ ಪ (ಯ್), ಶ ಷ ಸ (ರ್), ಹ (ಲ್)

ಇವು ಮಾಹೇಶ್ವರ ಸೂತ್ರಗಳು.

ನೃತ್ತಾವಸಾನೇ ನಟರಾಜರಾಜೋ
ನನಾದ ಢಕ್ಕಾಂ ನವಪಂಚವಾರಂ ।
ಉದ್ಧರ್ತುಕಾಮಸ್ಸನಕಾದಿ ಸಿದ್ಧಾನ್
ಏತದ್ವಿಮರ್ಶೇ ಶಿವಸೂತ್ರಜಾಲಂ ॥

ಈ ವಿಷಯವನ್ನು ಕುರಿತು ಪಾತಂಜಲ ಮಹಾಭಾಷ್ಯದ ವ್ಯಾಖ್ಯಾಕಾರ ನಾಗೋಜಿಭಟ್ಟ (ಕ್ರಿ. ಶ. ೧೭೦೦)ನು ತನ್ನ ಪ್ರದೀಪೋದ್ಯೋತದಲ್ಲಿ

"ವ್ಯಾಖ್ಯಾತಾ ಚೈಷಾ ಚತುರ್ದಶಸೂತ್ರೀ ಬ್ರಹ್ಮಪರತಯಾ ನಂದಿಕೇಶ್ವ ರೇಣ;ತದರ್ಥಂ ಸಕಲ ವಾಕ್‌ಜ್ಞಾನಾರ್ಥಂ ಬ್ರಹ್ಮಬೋಧನಾರ್ಥಂಚ. ಅನೇನ

ಯತ್ಫಲಂ ತದಕ್ಷರ ಸಮಾಮ್ನಾಯ ಜ್ಞಾನೇನ ಸೂಚಿತಂ". (ಮಹಾಭಾಷ್ಯ–ಪ್ರದೀಪೋದ್ಯೋತ ಅ. ೧. ಪಾ. ೧. ಆ. ೨. ಪು. ೯೦).

ನಂದಿಕೇಶ್ವರ ಕಾರಿಕೆಗಳು ಒಟ್ಟು ಇಪ್ಪತ್ತೇಳು. ಇವುಗಳಿಗೆ ಉಪಮನ್ಯು ಶಿವಾಚಾರ್ಯನ "ತತ್ತ್ವವಿಮರ್ಶಿನಿ" ಎಂಬ ವ್ಯಾಖ್ಯೆ ಇದೆ. ಪತಂಜಲಿಯು "ಸೋಽಯಮಕ್ಷರಸಮಾಮ್ನಾಯೋ ಬ್ರಹ್ಮರಾಶಿಃ" ಎಂದಿದ್ದಾನೆ. "ಬ್ರಹ್ಮ ತತ್ತ್ವವೇ ಶಬ್ದರೂಪದಿಂದ ತೋರುತ್ತದೆ" ಎಂದು ಕೈಯಟನೂ ಸಮರ್ಥಿಸಿದ್ದಾನೆ.

ಸೃಷ್ಟಿಯು ಶಬ್ದ ಮತ್ತು ಅರ್ಥ ಎಂದು ಎರಡು ಬಗೆ. ಇವೆರಡೂ ಶಿವ-ಶಕ್ತಿ ಸ್ವರೂಪ. ಶಬ್ದವು ಶಕ್ತಿ, ಅರ್ಥ ಶಿವ. ಬಾದರಾಯಣರು ತಮ್ಮ ಉತ್ತರ ಮೀಮಾಂಸೆಯ "ಜನ್ಮಾದ್ಯಧಿಕರಣ"ದಲ್ಲಿ ಪರಶಿವನಿಗೆ ಅರ್ಥಪ್ರಪಂಚ ಕರ್ತೃತ್ವ ವನ್ನೂ "ಶಾಸ್ತ್ರಯೋನಿತ್ವಾಧಿಕರಣ" ದಲ್ಲಿ ಶಬ್ದ ಪ್ರಪಂಚಕರ್ತೃತ್ವವನ್ನೂ ಪ್ರಸ್ತಾಪಿಸಿದ್ದಾರೆ.

ಮಾತು ಆಡುವವನ ಅಧೀನ; ಮತ್ತು ಅವನ ಇಚ್ಛೆಗೆ ವಿಷಯ. ಇಚ್ಛೆ ಆತ್ಮನ ಅಧೀನ.

ಚತ್ವಾರಿ ವಾಕ್ಪರಿಮಿತಾ ಪದಾನಿ
ತಾನಿ ವಿದುರ್ಬ್ರಾಹ್ಮಣಾ ಯೇ ಮನೀಷಿಣಃ ।
ಗುಹಾತ್ರೀಣಿ ನಿಹಿತಾ ನೇಂಗಯಂತಿ
ತುರೀಯಾಂ ವಾಚಂ ಮನುಷ್ಯಾ ವದಂತಿ ॥

ಎಂಬ ಶ್ರುತಿ ಶಬ್ದ ಪ್ರವೃತ್ತಿಯ ವಿಕಾಸವನ್ನು ಹೇಳಿದೆ. ಅಂತರಾತ್ಮ (ಜೀವ)ನ ಇಚ್ಛಾಶಕ್ತಿಯ ಸ್ಫುರಣದಿಂದ, ಅನುಕೂಲ ಪವನನ ಚಲನವುಂಟಾಗಿ ನಾಭಿಯ ಮೂಲದಲ್ಲಿ ನಾದ ಉದಿಸುತ್ತದೆ. ಅದು ನಾಭಿ, ಹೃದಯ, ಕಂಠ ಮತ್ತು ಮುಖಗಳಲ್ಲಿ ಕ್ರಮವಾಗಿ ಪರಾ (ಸೂಕ್ಷ್ಮ) ಪಶ್ಯಂತೀ ಮಧ್ಯಮಾ ಮತ್ತು ವೈಖರಿಗಳೆಂಬ ಹೆಸರು ತಳೆದು ಅಂಕುರಾಯಮಾಣ, ಅಂಕುರಿತ, ಪಲ್ಲವಿತ ಮತ್ತು ಫಲಿತ ಎಂಬ ಅವಸ್ಥೆಗಳನ್ನು ಹೊಂದಿ ಶಬ್ದರೂಪು ತಳೆಯುತ್ತದೆ.

ಶಬ್ದವು ಅಕ್ಷರಾತ್ಮಕ. ಪರಬ್ರಹ್ಮನಿಗೆ 'ಅಕ್ಷರ' ಎಂಬ ಹೆಸರಿದೆ. ಅಕ್ಷರವು ಲೇಖಾತ್ಮಕ-ಸಂಕೇತ ತಳೆದು 'ಮಾತೃಕಾವರ್ಣ' ವೆನಿಸುತ್ತದೆ. 'ಶ್ರೀ ತಂತ್ರ

ಸದ್ಭಾವ'ದಲ್ಲಿ 'ಅ' ಕಾರ ಮೊದಲು 'ಕ್ಷ' ಕಾರದ ವರೆಗಿನ ಐವತ್ತೆರಡು ಅಕ್ಷರಗಳನ್ನೂ 'ಮಾತೃಕಾ' ಎಂದು ಕರೆಯಲಾಗಿದೆ.

ಸರ್ವೇ ವರ್ಣಾತ್ಮಕಾ ಮಂತ್ರಾಃ ತೇ ಚ ಶಕ್ತ್ಯಾತ್ಮಕಾಃ ಪ್ರಿಯೇ ।
ಶಕ್ತಿಸ್ತು ಮಾತೃಕಾ ಜ್ಞೇಯಾ ಸಾ ಚ ಜ್ಞೇಯಾ ಶಿವಾತ್ಮಿಕಾ ॥
ಯಾ ಸಾ ತು ಮಾತೃಕಾ ದೇವಿ ಪರತೇಜಃ ಸಮನ್ವಿತಾ ।
ತಯಾ ವ್ಯಾಪ್ತಮಿದಂ ವಿಶ್ವಂ ಸಬ್ರಹ್ಮಭುವನಾಂತಕಂ ॥
(ಶಿವಸೂತ್ರ ವಿಮರ್ಶಿನೀ ಪು. ೫೦)

ಅಕ್ಷರಗಳಲ್ಲಿಯೂ ಸಹ ಅಕಾರದಿಂದ ವಿಸರ್ಗದ ವರೆಗಿನ ಸ್ವರಗಳು ಶಕ್ತಿರೂಪ. ಕಕಾರದಿಂದ ಕ್ಷರಾರದ ವರೆಗಿನ ಕ್, ಖ್, ಮುಂತಾದ ವ್ಯಂಜನಗಳು "ಶಿವಸ್ವರೂಪ." ಕ್, ಖ್, ಮುಂತಾದ ವ್ಯಂಜನಗಳು ಸ್ವರಗಳ ಸಂಬಂಧವಿಲ್ಲದೆ ಉಚ್ಚರಿಸಲು ಸಾಧ್ಯವಿಲ್ಲ. ಆದುದರಿಂದಲೇ ಶ್ರೀ ಶಂಕರಾಚಾರ್ಯರು—
"ಶಿವಃ ಶಕ್ತ್ಯಾಯುಕ್ತೋ ಯದಿ ಭವತಿ ಶಕ್ತಃ ಪ್ರಭವಿತುಂ" ಎಂದದ್ದು.

ಕಕಾರಾದಿಕ್ಷಕಾರಾಂತಾ: ವರ್ಣಾಸ್ತೇ ಶಿವರೂಪಿಣ: ।
ಅಕಾರಾದಿವಿಸರ್ಗಾಂತಾಸ್ಸ್ವರಾಃ ಷೋಡಶಶಕ್ತಯಃ ॥
(—ಮಾತೃಕಾ ಹೃದಯ)

ಎಂಬ ಉಕ್ತಿ ಮೇಲಿನ ವಿಷಯವನ್ನೇ ಸಮರ್ಥಿಸಿದೆ.

## ಮಾಹೇಶ್ವರ ಸೂತ್ರಗಳ ಭಾವಾರ್ಥ

ಪ್ರಕೃತ ಮಾಹೇಶ್ವರ ಸೂತ್ರಗಳಿಗೆ ನಂದಿಕೇಶ್ವರನು ಶಿವಾದ್ವೈತ ಪರವಾಗಿ ಬರೆದ ವೃತ್ತಿರೂಪಕಾರಿಕೆಗಳ ಭಾವಾರ್ಥವನ್ನು ಸಂಕ್ಷೇಪವಾಗಿ ಇಲ್ಲಿ ವಿವರಿಸಲಾಗಿದೆ.

ಪಾಣಿನಿಯು ಮಾಹೇಶ್ವರ ಸೂತ್ರಗಳ ಕಡೆಯಲ್ಲಿರುವ "ಣ್, ಕ್" ಮುಂತಾದ ವ್ಯಂಜನಗಳನ್ನು 'ಇತ್' ಸಂಜ್ಞೆಗಳೆಂದು ಪರಿಗಣಿಸಿ "ಅಣ್, ಅಕ್" ಮುಂತಾದ ಪ್ರತ್ಯಾಹಾರಗಳನ್ನು ಮಾಡಿಕೊಂಡು ಶಬ್ದ (ವ್ಯಾಕರಣ) ಶಾಸ್ತ್ರ ಪ್ರವರ್ತಕನಾದ. ಅದರಂತೆ ನಂದಿಕೇಶ್ವರನು ಅದೇ ಮಾಹೇಶ್ವರ ಸೂತ್ರಗಳ ಕಡೆಯಲ್ಲಿರುವ ಣ್, ಕ್ ಎಂಬ ವ್ಯಂಜನಗಳನ್ನು ಧಾತ್ವರ್ಥವೆಂದು ಪರಿಗಣಿಸಿ ಬ್ರಹ್ಮ (ಅಧ್ಯಾತ್ಮ) ಶಾಸ್ತ್ರ ಪ್ರವರ್ತಕನೆನಿಸಿದ. "ಅಂತ್ಯವರ್ಣ ಸಮುದ್ಭೂತಾ ಧಾತವಃ

ಪರಿಕೀರ್ತಿತಾಃ " ಎಂಬುದು ನಂದಿಕೇಶ್ವನ ಭಾವ.

ಅತ್ರ ಸರ್ವತ್ರ ಸೂತ್ರೇಷು ಅಂತ್ಯವರ್ಣಚತುರ್ದಶಮ್ ।
ಧಾತ್ವರ್ಥಂ ಸಮುಪಾದಿಷ್ಟಂ ಪಾಣಿನ್ಯಾದೀಷ್ಟಸಿದ್ಧಯೇ ॥ ೨ ॥

ಎಂಬ ಕಾರಿಕೆ ಈ ಅರ್ಥವನ್ನು ಸಮರ್ಥಿಸಿದೆ.

ಅ ಇ ಉಣ್ ॥ ೧ ॥

ಮಾಹೇಶ್ವರ ಸೂತ್ರಗಳಲ್ಲಿ ಇದು ಮೊದಲನೆಯ ಸೂತ್ರ. ಎಲ್ಲ ವರ್ಣಗಳು ಮತ್ತು ಎಲ್ಲ ಭುವನಗಳಿಗೆ ಪರಶಿವನ ಸ್ವಾತ್ಮತತ್ತ್ವವೇ ಮೂಲ.

ಅಕಾರೋ ಬ್ರಹ್ಮರೂಪಃ ಸ್ಯಾನ್ನಿರ್ಗುಣಃ ಸರ್ವವಸ್ತುಷು ।
ಚಿತ್ಕಲಾಮಿಂ ಸಮಾಶ್ರಿತ್ಯ ಜಗದ್ರೂಪ ಉಣೀಶ್ವರಃ ॥ ೩ ॥

ಅ–ನಿರ್ಗುಣ[1] ಪರಮೇಶ್ವರನು, ಇಂ–ಚಿತ್ಕಲೆಯನ್ನು ಆಶ್ರಯಿಸಿ ; ಉ–ವ್ಯಾಪಕನೂ, ಸಗುಣನೂ ಣ್–ಆದನು.

ಶಿವನು ಪರಾ, ಪಶ್ಯಂತೀ ಮಧ್ಯಮಾ ಮತ್ತು ವೈಖರೀ ಎಂಬ ನಾಲ್ಕು ಬಗೆಯ ವಾಕ್ ಪ್ರವೃತ್ತಿಗಳಲ್ಲಿ ಚಿತ್ಕಲೆಯನ್ನು ಆಶ್ರಯಿಸಿದ್ದಾನೆ. ಸೃಷ್ಟಿಯ ಪ್ರಾರಂಭದಲ್ಲಿ " ಅ–ಇ–ಉ–ಋ–ಲೃ " ಎಂಬ ಐದು ವರ್ಣಗಳೇ ಇದ್ದದ್ದು. ಅವು ಉಳಿದ ನಲವತ್ತೊಂಬತ್ತು ವರ್ಣಗಳಿಗೆ ಮತ್ತು ಪಂಚಭೂತಗಳೇ ಮೊದಲಾದ ಐದು ವರ್ಗಗಳಿಗೆ ಕಾರಣವಾದವು. " ಅಸದ್ ವಾ ಇದಮಗ್ರ ಆಸೀತ್ " ಎಂಬ ಶ್ರುತಿಯಂತೆ ಸೃಷ್ಟಿಗೆ ಮೊದಲು 'ಅಸತ್' ಎನಿಸಿದ್ದ ಬ್ರಹ್ಮವು 'ಅಕ್ಷರ' ರೂಪದಿಂದ ಇತ್ತು. ಅಕ್ಷರ ಬ್ರಹ್ಮದ ದೆಶೆಯಿಂದ ಸಗುಣವು ಉದಿಸಿತು. ಗೀತೆಯಲ್ಲಿ " ಅಕ್ಷರಾಣಾಮಕಾರೋಽಸ್ಮಿ " ಎಂದುದು ಇದನ್ನೇ !

ಅಕಾರಃ ಸರ್ವವರ್ಣಾಗ್ರ್ಯಃ ಪ್ರಕಾಶಃ ಪರಮೇಶ್ವರಃ ।
ಆದ್ಯಮಂತೇನ ಸಂಯೋಗಾದಹಮಿತ್ಯೇವ ಜಾಯತೇ ॥ ೪ ॥

ಅಕಾರವು ಎಲ್ಲವರ್ಣಗಳಿಗೂ ಮೊದಲನೆಯದು. ಅದು ಪ್ರಕಾಶಮಯ ನಾದ ಪರಶಿವಸ್ವರೂಪ. ಈ 'ಅ' ಕಾರವು ಕಡೆಯ ಸೂತ್ರದಲ್ಲಿರುವ 'ಹ' ಕಾರದೊಡನೆ ಸೇರಿ "ಅಹಂ" ಎಂಬ ರೂಪು ತಳೆಯಿತು. ಎಂದರೆ ಅಕಾರ

---

1. ನಿರ್ಗುಣ ಎಂದರೆ ಹೇಯಗುಣರಹಿತ ಎಂದು ಅರ್ಥ, ಏಕೆಂದರೆ ಪರಶಿವನು ಸರ್ವಜ್ಞತ್ವಾದಿ ಸಕಲ ಕಲ್ಯಾಣ ಗುಣಗಳಿಗೆ ಆಶ್ರಯನಾಗಿದ್ದಾನೆ.

ಮೊದಲುಗೊಂಡು ಹಕಾರದ ವರೆಗಿನ ಎಲ್ಲವರ್ಣಗಳೂ "ಅಹಂ" ರೂಪನಾದ ಪರಶಿವನ ಸ್ವರೂಪನೇ. ಇದೇ ಅರ್ಥವನ್ನು ಭಗವತ್ಪಾದ ರೇಣುಕರು—

ಅಕಾರಃ ಶಿವ ಆಖ್ಯಾತೋ ಹಂಕಾರಃ ಶಕ್ತಿರುಚ್ಯತೇ ।
ಶಿವಶಕ್ತಿಮಯಂ ಬ್ರಹ್ಮ ಸ್ಥಿತಮೇಕಮಹಂ ಪದೇ ॥

(ಸಿ. ಶಿ. ೨೦)

ಎಂದು ಸಮರ್ಥಿಸಿದ್ದಾರೆ.

ಸರ್ವಂ ಚರಾಚರಾತ್ಮಕಂ ಪೂರ್ವಂ ಜ್ಞಪ್ತಿರೂಪಮಿದಂ ಜಗತ್ ।
ಜ್ಞಪ್ತೇರ್ಬಭೂವ ಪಶ್ಯಂತೀ ಮಧ್ಯಮಾ ವಾಕ್ ತತಃ ಸ್ಮೃತಾ ॥ ೫ ॥
ವಕ್ತ್ರೇ ವಿಶುದ್ಧಚಕ್ರಾಖ್ಯೇ ವೈಖರೀ ಸಾ ಮತಾ ತತಃ ।
ಸೃಷ್ಟ್ಯಾವಿರ್ಭಾವಮಾಸಾದ್ಯ ಮಧ್ಯಮಾ ವಾಕ್‌ಸಮಾ ಮತಾ ॥ ೬ ॥

ಸೃಷ್ಟಿಗೆ ಮೊದಲು ಚರಾಚರಾತ್ಮಕವೂ ಪರಾ ವಾಕ್ ಸ್ವರೂಪವೂ ಆದ ಈ ವಿಶ್ವವು ಪರಶಿವನಲ್ಲಿ ಜ್ಞಪ್ತಿ ರೂಪದಿಂದ ಅಡಗಿತ್ತು. ಅದು ಶಿವನ ಸಂಕಲ್ಪದಿಂದ ಪರಾ, ಪಶ್ಯಂತೀ, ಮಧ್ಯಮಾ ಮತ್ತು ವೈಖರೀ ಮುಂತಾಗಿ ವಿಕಾಸಹೊಂದಿ ಶಬ್ದಾತ್ಮಕವಾಗಿಯೂ ಷಟ್‌ತ್ರಿಂಶತ್ ತತ್ತ್ವಾತ್ಮಕ ವಿಶ್ವವಾಗಿಯೂ ಪರಿಣಮಿಸಿತು.

ಅಕಾರಂ ಸನ್ನಿಧೀಕೃತ್ಯ ಜಗತಾಂ ಕಾರಣತ್ವತಃ ।
ಇಕಾರಂ ಸರ್ವವರ್ಣಾನಾಂ ಶಕ್ತಿತ್ವಾತ್ಕಾರಣಂ ಮತಮ್ ॥ ೭ ॥

ಇಕಾರ ವಾಚ್ಯವಾದ ಶಕ್ತಿಯು ಅಕಾರವಾಚ್ಯ ಶಿವನೊಡನೆ ಅವಿನಾಭಾವ ಸಂಬಂಧದಿಂದ ಕೂಡಿ ಚರಾಚರ ಪ್ರಪಂಚಕ್ಕೆ ಕಾರಣವಾಯಿತು.

ಜಗತ್‌ಸೃಷ್ಟಿಗೆ ಕಾರಣವಾದ ಇಚ್ಛಾಶಕ್ತಿಯನ್ನು ಕಾಮಬೀಜವೆಂದು ಕರೆಯಲಾಗಿದೆ ಎಂಬುದು ಮುಂದಿನ ಸೂತ್ರದಿಂದ ವೇದ್ಯವಾಗಿದೆ.

ಜಗತ್‌ಸ್ರಷ್ಟುಂ ಪ್ರಭೋರಿಚ್ಛಾ ಯದಾ ಹ್ಯಾಸೀತ್ತದಾಽಭವತ್ ।
ಕಾಮಂಬೀಜಮಿತಿ ಪ್ರಾಹುರ್ಮುನಯೋ ವೇದಪಾರಗಾಃ ॥ ೮ ॥

ಅ–ಇ–ಉ ಈ ಮೂರು ವರ್ಣಗಳಲ್ಲಿ ಅಕಾರವು ಕೇವಲ ಜ್ಞಪ್ತಿಮಾತ್ರ; ಎಂದರೆ ಚೈತನ್ಯಸ್ವರೂಪ ಪರಶಿವವಾಚಕ. ಇಕಾರವು ಶಕ್ತಿವಾಚಕ. ಉಕಾರವು ವ್ಯಾಪಕತ್ವ ಧರ್ಮವುಳ್ಳ ವಿಷ್ಣುವಾಚಕ. ಎಂದರೆ ಶಕ್ತಿವಿಶಿಷ್ಟ ಪರಶಿವನು ಸಕಲ ಚರಾಚರಾತ್ಮಕ ಪ್ರಪಂಚವನ್ನು ವ್ಯಾಪಿಸಿದ್ದಾನೆ ಎಂಬ ಭಾವವನ್ನು ಮುಂದಿನ ಕಾರಿಕೆ ಸೂಚಿಸುತ್ತದೆ.

ಅಕಾರೋ ಜ್ಞಪ್ತಿಮಾತ್ರಂ ಸ್ಯಾದಿಕಾರಶ್ಚಿತ್ಕಲಾ ಮತಾ ।
ಉಕಾರೋ ವಿಷ್ಣುರಿತ್ಯಾಹುರ್ವ್ಯಾಪಕತ್ವಾನ್ಮಹೇಶ್ವರಃ ॥ ೯ ॥

ಪರಮೇಶ್ವರನು 'ಏಕಮೇವಾದ್ವಿತೀಯ'. ಅಂಥ ಬ್ರಹ್ಮ ಮಾಯಾರೂಪ ಚಿತ್ಕಲೆಯನ್ನು ಆಶ್ರಯಿಸಿ ಜಗದ್ರೂಪನಾದ ಎಂದರೆ ಅವನ ಅದ್ವಿತೀಯತ್ವಕ್ಕೆ ಭಂಗಬರುವುದಿಲ್ಲವೆ? ಎಂಬ ಆಶಂಕೆಗೆ ಸಮಾಧಾನ ಹೇಳಲು ಎರಡನೆಯ ಸೂತ್ರವು ಹೊರಟಿದೆ.

ಋ ಲೃಕ್ ॥ ೨ ॥

ಋ–ಪರಮೇಶ್ವರನು ಲೃ–ಮಾಯೆಯಲ್ಲಿ ಮನೋವೃತ್ತಿಯನ್ನು ಕ್–ಪ್ರಕಟಿಸಿದನು. ಎಂದರೆ ಸ್ವೇಚ್ಛೆಯಿಂದ ಆ ಮಾಯೆಯನ್ನು ಆಶ್ರಯಿಸಿ ಜಗತ್ತನ್ನು ಸೃಜಿಸಿದನು. "ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯ" ಎಂಬ ಶ್ರುತಿ ಈ ಅರ್ಥವನ್ನು ಸೂಚಿಸಿದೆ. ಶ್ರೀ ತಂತ್ರದಲ್ಲಿ "ಮತ್ತೋ ಹ್ಯಭಿನ್ನರೂಪ ಲೃಕಾರಃ ಪರಮೇಶ್ವರಿ" ಎಂದು ಸಮರ್ಥಿಸಲಾಗಿದೆ. ಶಬ್ದಶಾಸ್ತ್ರದಲ್ಲಿ ಋ-ಲೃ ವರ್ಣಗಳಿಗೆ ಮಿಥಃ (ಪರಸ್ಪರ) ಸಾವರ್ಣ್ಯ ಎಂದರೆ ತಾದಾತ್ಮ್ಯವನ್ನು ಹೇಳಲಾಗಿದ. ಅದರಂತೆ ಶಿವ-ಶಕ್ತಿಗಳಿಗೆ ತಾದಾತ್ಮ್ಯವೇ ಇರುವುದರಿಂದ ಶಿವನ ಅದ್ವಿತೀಯತ್ವಕ್ಕೆ ಹಾನಿ ಬರಲಿಲ್ಲ. ಇಲ್ಲಿ ಉಕ್ತವಾಗಿರುವ ಮಾಯೆ ಅದ್ವೈತಿಗಳ 'ಮಿಥ್ಯಾ' ರೂಪವಲ್ಲ. ಅದು ಪರಶಿವಶಕ್ತಿರೂಪ. ಈ ಅರ್ಥವನ್ನು ಮುಂದಿನ ಕಾರಿಕೆಯು ಸಮರ್ಥಿಸುತ್ತದೆ.

ಋ-ಲೃಕ್ ಸರ್ವೇಶ್ವರೋ ಮಾಯಾಂ ಮನೋವೃತ್ತಿರದರ್ಶಯತ್ ।
ತಾಮೇವ ವೃತ್ತಿಮಾಶ್ರಿತ್ಯ ಜಗದ್ರೂಪ ಮಜೀಜನತ್ ॥ ೧೦ ॥

ವೃತ್ತಿವೃತ್ತಿಮತೋರತ್ರ ಭೇದಲೇಶೋ ನ ವಿದ್ಯತೇ ।
ಚಂದ್ರಚಂದ್ರಿಕಯೋರ್ಯದ್ವತ್ ತಥಾ ವಾಗರ್ಥಯೋರಪಿ॥ ೧೧ ॥

ಚಂದ್ರ-ಚಂದ್ರಿಕೆಗಳಿಗೆ, ಶಬ್ದ-ಅರ್ಥಗಳಿಗೆ ಹೇಗೆ ಅವಿನಾಭಾವವೋ ಅದರಂತೆ ವೃತ್ತಿ-ವೃತ್ತಿಮತ್ ಎಂದರೆ ಧರ್ಮ-ಧರ್ಮಿಗಳಿಗೆ ಭೇದವಿಲ್ಲ.

ಸ್ವೇಚ್ಛಯಾ ಸ್ವಸ್ಯಚಿಚ್ಛಕ್ತೌ ವಿಶ್ವಮುನ್ಮೀಲಯತ್ಯಸೌ ।
ವರ್ಣಾನಾಂ ಮಧ್ಯಮಂ ಕ್ಲೀಬಮೃಲೃವರ್ಣದ್ವಯಂ ವಿದುಃ ॥ ೧೨ ॥

ಈ ಕಾರಿಕೆಯಲ್ಲಿ ಪರಶಿವನು ತನ್ನ ಚಿಚ್ಛಕ್ತಿಯಲ್ಲಿ ಬೆರೆತು ವಿಶ್ವವನ್ನು ಸೃಜಿಸಿದನೆಂದು ಶಕ್ತಿವಿಶಿಷ್ಟಾದ್ವೈತದ ಹೃದಯವನ್ನೇ ನಿರೂಪಿಸಲಾಗಿದೆ.

ಹಿಂದಿನ ಕಾರಿಕೆಯಲ್ಲಿ "ತಾಮೇವ ವೃತ್ತಿಮಾಶ್ರಿತ್ಯ ಜಗದ್ರೂಪ ಮಜೀಜನತ್" ಎಂದು ಹೇಳಿರುವುದರಿಂದ ಜಗತ್ತು ಮತ್ತು ಶಿವರಿಗೆ ಜನ್ಯ-ಜನಕ ಭಾವವನ್ನು ಒಪ್ಪಿದಂತಾಯಿತು. ಇದರಿಂದ ಶಿವನ ಅದ್ವಿತೀಯತ್ವಕ್ಕೆ ಭಂಗಬರುವುದಿಲ್ಲವೆ ? ಎಂದರೆ ಈ ಶಂಕೆಯನ್ನು ಪರಿಹರಿಸಲು ಮುಂದಿನ ಸೂತ್ರವು ಹೊರಟಿದೆ.

ಏ ಓ ಙ್ ॥೩॥

ಏ ಓ ಙ್ ಮಾಯೇಶ್ವರಾತ್ಮೈಕ್ಯಂ ವಿಜ್ಞಾನಂ ಸರ್ವವಸ್ತುಷು ।
ಸಾಕ್ಷಿತ್ವಾತ್ ಸರ್ವಭೂತಾನಾಂ ಸ ಏಕ ಇತಿ ನಿಶ್ಚಿತಮ್ ॥ ೧೩ ॥

"ತತ್ ಸೃಷ್ಟ್ವಾ ತದೇವಾನುಪ್ರಾವಿಶತ್" ಎಂಬ ಶ್ರುತಿಯಂತೆ ಶಿವನು ಜಗತ್ತನ್ನು ಸೃಜಿಸಿ ತಾನೆ ಜಗದ್ರೂಪನಾಗಿ ಪರಿಣಮಿಸುವುದರಿಂದ ಶಿವ-ಜಗತ್ತುಗಳಿಗೆ ಜನ್ಯಜನಕ ಭಾವವಿಲ್ಲ; ಎಂದರೆ ಶಿವನ ಅದ್ವಿತೀಯತ್ವಕ್ಕೆ ಭಂಗ ಬರುವುದಿಲ್ಲವೆಂಬುದು "ಸ ಏಕ ಇತಿ ನಿಶ್ಚಿತಂ" ಎಂಬ ಉಕ್ತಿಯಲ್ಲಿ ಸ್ಪಷ್ಟವಾಗಿದೆ. ಅಕಾರ ಮತ್ತು ಉಕಾರಗಳ ಸಂಯೋಗದಿಂದ (ಗುಣ) ನಿಷ್ಪನ್ನವಾದ ಪ್ರಣವರೂಪ ಓಂಕಾರದಿಂದ ಸಗುಣ ಮತ್ತು ನಿರ್ಗುಣಗಳಿಗೆ ಏಕತ್ವವು ಸಿದ್ಧವಾಗುತ್ತದೆ. ಅ+ಇ–ಏ, ಅ+ಉ–ಓ ಎಂಬ ಸಂಯೋಗವು ಅಕ್ಷರ ಸಮನ್ವಯವನ್ನು ಬೋಧಿಸುತ್ತದೆ. ಯಾವುದು ಅ–ಅಕ್ಷರಾತ್ಮಕವೊ ಇ–ಮಾಯೆಯಿಂದ ಕೂಡಿದೆಯೋ ಅದು ಅ–ಉ=ಪ್ರಜ್ಞಾಸ್ವರೂಪ; ಎಂದರೆ ಪ್ರಜ್ಞಾತ್ಮ. ಎಲ್ಲ ವಸ್ತುಗಳೂ ಒಂದು ಎಂಬುದರಿಂದ ಅದ್ವೈತವು ಸಿದ್ಧಿಸುತ್ತದೆ. ಇದರಿಂದ ಅನೇಕತ್ವವಾಗಲಿ, ಜನ್ಯ-ಜನಕಭಾವವಾಗಲಿ ಬರುವುದಿಲ್ಲ; ಎಂದರೆ ಪರಶಿವನು ಜಗತ್ತನ್ನು ಸೃಜಿಸಿ ಜಗದ್ರೂಪವಾಗಿಯೇ ಪರಿಣಮಿಸಿರುವುದರಿಂದ ಹಿಂದೆ ಸೂಚಿಸಿದಂತೆ ಅ-ಇ-ಉ-ಋ-ಲೃ ಎಂಬ ಐದು ವರ್ಣಗಳೇ 'ವಟಬೀಜ' ನ್ಯಾಯದಂತೆ ನಿಖಿಲ ಜಗತ್ತಿಗೂ ಕಾರಣಗಳೆಂಬುದು ಸ್ಪಷ್ಟವಾಯಿತು. ಮುಂದಿನ ಸೂತ್ರಗಳಲ್ಲಿ ಹೇಳಿರುವ ಉಳಿದ ಎಲ್ಲವರ್ಣಗಳೂ ಇವುಗಳಿಂದಲೇ ಜನಿಸಿವೆ.

ಸನಕ–ದಕ್ಷಿಣಾಮೂರ್ತಿ ಸಂವಾದದಲ್ಲಿ ಮಹಾವಾಕ್ಯವನ್ನು ವಿವರಿಸುವ ಸಂದರ್ಭದಲ್ಲಿ

ಶೃಣು ತ್ವಂ ಸಾವಧಾನೇನ ಚತುರ್ಣಾಂ ಚ ಸಮಾನತಾಂ ।
ವೇದಾನಾಂ ಚ ಮಹಾಭಾಗ ಚತುಷ್ಟಯಮಿಹೋಚ್ಯತೇ ॥
ಬ್ರಹ್ಮಶಬ್ದೇನ ಯದ್ವಸ್ತು ತತ್ಪ್ರಜ್ಞಾನಮಿತೀರಿತಮ್ ॥
ಪ್ರಜ್ಞಾನಂ ಬ್ರಹ್ಮಯಸ್ಮಾದ್ಧಿ ತಸ್ಮಾತ್ ಬ್ರಹ್ಮಾಹಮಸ್ಮ್ಯಹಮ್ ॥
ತದ್ಬ್ರಹ್ಮ ಸರ್ವಸಾಕ್ಷೀತಿ ತತ್ತ್ವಮಸ್ಯೇವ ತತ್ತ್ವತಃ ।
ಅನ್ಯತ್ವವಾರಣಾರ್ಥಾಯ ಯಮಾತ್ಮೇತ್ಯಪಿ ವರ್ಣ್ಯತೇ ॥

ಸ್ವಾತ್ಮಭೂತನಾದ ಪರಶಿವನು ಜಗತ್ತಿಗೆ ಕಾರಣನಾಗುವುದು ಹೇಗೆ ಎಂಬ ಶಂಕೆಗೆ ಸಮಾಧಾನವನ್ನು ಮುಂದಿನ ಸೂತ್ರವು ಹೇಳುತ್ತದೆ.

ಐ ಔ ಚ್ ॥ ೪ ॥

ಐ ಔ ಚ್ ಬ್ರಹ್ಮಸ್ವರೂಪಸ್ಸನ್ ಜಗತ್‌ಸ್ವಾಂತರ್ಗತಂ ತತಃ ।
ಇಚ್ಛಯಾ ವಿಸ್ತೃತಂ ಕರ್ತುಮಾವಿರಾಸೀನ್ಮಹಾ ಮುನಿಃ ॥ ೧೪ ॥

ತನ್ನಲ್ಲಿ "ಮಯೂರಾಂಡರಸ" ನ್ಯಾಯದಂತೆ ಸೂಕ್ಷ್ಮರೂಪವಾಗಿ ಅಡಗಿರುವ ಜಗತ್ತನ್ನು ವಿಸ್ತರಿಸಲು ಸಂಕಲ್ಪಿಸಿದ ಪರಶಿವನು ಐ–ಜ್ಞಾನ ಶಕ್ತಿಯುತನಾದ; ಎಂದರೆ ಇಚ್ಛಾ–ಜ್ಞಾನ–ಕ್ರಿಯಾಶಕ್ತಿಗಳಲ್ಲಿ ಬೆರೆತನು. ಆದರಿಂದ ಅಕಾರಕ್ಕೆ ಏ (ಅ+ಏ=ಐ) ಕಾರವು ಸೇರಿ ಐ (ವೃದ್ಧಿ) ಕಾರವಾಯಿತು. ಎಂದರೆ ಪರಶಿವನು ಹಿಂದೆ ಹೇಳಿದಂತೆ ಸಂಪ್ರಜ್ಞಾತನೆಂದು ಸಿದ್ಧವಾಯಿತು. ಇದರಂತೆ ಅಕಾರಕ್ಕೆ ಓ (ಅ+ಓ=ಔ) ಓಕಾರವು ಸೇರಿ ಔ ಆಯಿತು; ಎಂದರೆ ಸಂಪ್ರಜ್ಞಾತ ಸ್ವರೂಪನಾದ ಪರಶಿವನು ಮಾಯಾಶಬಳಿತನಾದ. ಒಟ್ಟಿನಲ್ಲಿ "ಪ್ರಣವೇನ ಜಗದ್ವ್ಯಾಪ್ತಂ ಮಾಯಯಾಮನತಿಷ್ಠತೇ" ಎಂಬತೆ ಪ್ರಣವದ ವಿಕಾಸರೂಪವಾದ ಅ ಆ, ಇ ಈ, ಉ ಊ, ಋ ೠ ಲೃ, ಏ ಐ; ಓ ಔ ಎಂಬ ಹದಿಮೂರು ವರ್ಣಗಳ ಸಮುದಾಯದಿಂದ ಶಿವ–ಶಕ್ತಿ–ಸದಾಶಿವ–ಈಶ್ವರ–ಶುದ್ಧವಿದ್ಯಾ–ಮಾಯಾ–ಕಲಾ–ವಿದ್ಯಾ–ರಾಗ–ಕಾಲ–ನಿಯತಿ–ಪುರುಷ ಮತ್ತು ಪ್ರಕೃತಿ ಎಂಬ ಹದಿಮೂರು ತತ್ತ್ವಗಳು ಹುಟ್ಟಿದವು.

ಪ್ರಕೃತಿ–ಪುರುಷ ವಿವೇಕವನ್ನು ಮುಂದೆ ವಿಸ್ತರಿಸಲಾಗುತ್ತದೆ. ಇಲ್ಲಿ ಲೃ ವರ್ಣಕ್ಕೆ ದೀರ್ಘವನ್ನೂ ಸೇರಿಸಿದರೆ ಹದಿನಾಲ್ಕು ಸ್ವರಗಳಾಗುತ್ತವೆ. ಆಗ ಹದಿನಾಲ್ಕು ಭುವನಗಳು, ಚತುರ್ದಶ ಚಕ್ರಗಳು ಮುಂತಾಗಿ ನಿರ್ಧರಿಸಬೇಕು.

ಶಿವ–ಗೌರೀ ಸಂವಾದವುಳ್ಳ " ಮಹಾಮಂತ್ರ ತತ್ತ್ವಪ್ರಕಾಶಿನಿ " ಯಲ್ಲಿ—

ತವ ಮಂತ್ರೋಹಮೀಶಾನಿ ಮಮ ರೂಪಂ ತ್ವಮೇವ ಹಿ ।
ಚತುರ್ದಶಾತ್ಮಕಂ ಚಕ್ರಂ ಸ್ವರಚಕ್ರಮಿತೀರಿತಮ್ ॥

ತ್ರಯೋದಶಾತ್ಮಕಂ ತುರ್ಯಮಾವಯೋರ್ಮಂತ್ರಮಂಬಿಕ ।
ಉಚ್ಛೂನಕಾಲೇ ಬಿಂದ್ವಾತ್ಮಾ ತಸ್ಮಾದಕ್ಷರಸಂಭವಃ ॥

ಬಿಂದುಸ್ಫೋಟನ ಮಾತ್ರೇಣ ವರ್ಣಾನಾಂ ಚ ಸಮುದ್ಭವಃ ।
ತಸ್ಮಾದ್ವ್ಯೋಮಾದಿಕಂ ಭೂತಪಂಚಕಂ ಸಮಜಾಯತ ॥

ಬಿಂದುಃ ಶ್ರೀ ಚಕ್ರರಾಜಸ್ಯ ಪರಬ್ರಹ್ಮಾತ್ಮಕಸ್ಥಿತಿ ।

ಚತುರ್ದಶಾತ್ಮಕಃ ಪಶ್ಚಾಚ್ಚಕ್ರಾಕಾರೇಣ ಸಂಭವಃ ।
ತಾನ್ಯೇವ ಭುವನಾನ್ಯತ್ರ ಚತುರ್ದಶ ಚತುರ್ದಶ ॥

## ಪಂಚಭೂತಗಳ ಉತ್ಪತ್ತಿ

ಮುಂದಿನ ಸೂತ್ರವು ಶಕ್ತಿವಿಶಿಷ್ಟ ಪರಶಿವನಿಂದ ಆಕಾಶ–ವಾಯು–ವಹ್ನಿ ಮತ್ತುಸಲಿಲವೆಂಬ ನಾಲ್ಕು ತತ್ತ್ವಗಳ ಉತ್ಪತ್ತಿಯನ್ನು ಸೂಚಿಸುತ್ತದೆ.

ಹ ಯ ವ ರ ಟ್ ॥ ೫ ॥

ಭೂತಪಂಚಕಮೇತಸ್ಮಾದ್ಧಯವರಟ್ ಮಹೇಶ್ವರಾತ್ ।
ವ್ಯೋಮವಾಯ್ವಂಬು ವಹ್ನ್ಯಾಖ್ಯ ಭೂತಾನ್ಯಾಸೀತ್ಸ ಏವ ಹಿ ॥ ೧೫ ॥

ಹಕಾರದಿಂದ ಆಕಾಶ, ಯಕಾರದಿಂದ ವಾಯು ರೇಫದಿಂದ ಅಗ್ನಿ, ವಕಾರ ದಿಂದ ಜಲತತ್ತ್ವಗಳು ಹುಟ್ಟಿದವು ಎಂಬ ಕ್ರಮವನ್ನು ಮುಂದಿನ ಕಾರಿಕೆ ಹೇಳುತ್ತದೆ.

ಹಕಾರಾದ್ವ್ಯೋಮ ಸಂಜ್ಞಂ ಚ ಯಕಾರಾದ್ವಾಯುರುಚ್ಯತೇ ।
ರಕಾರಾದ್ವಹ್ನಿಸ್ತೋಯಂ ತು ವಕಾರಾದಿತಿ ಸೈವ ವಾಕ್ ॥ ೧೬ ॥

" ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಜಾತಃ " ಎಂಬ ಶ್ರುತಿಯ ಆಶಯವೇ ಇಲ್ಲಿ ಉಕ್ತವಾಗಿದೆ.

ಮೇಲಿನ ಸೂತ್ರದಲ್ಲಿ ಆಕಾಶಾದಿ ಪಂಚಭೂತಗಳಲ್ಲಿ ಆಕಾಶ-ವಾಯು-ವಹ್ನಿ-ಜಲ ಎಂಬ ನಾಲ್ಕು ತತ್ತ್ವಗಳನ್ನು ಹೇಳಿಯಾಯಿತು. ಮುಂದಿನ ಸೂತ್ರವು

ಎಲ್ಲ ಭೂತಗಳಿಗೂ ಆಧಾರವಾಗಿರುವ ಪೃಥಿವಿಯ ಉತ್ಪತ್ತಿಯನ್ನು ಹೇಳುತ್ತದೆ.

ಲಣ್ ॥ ೬ ॥

ಆಧಾರಸ್ಸರ್ವಭೂತಾನಾಮನ್ನಾದೀನಾಂ ಚ ಕಾರಣಮ್ ।
ಅನ್ನಾದ್ರೇತಸ್ತತೋ ಜೀವಃ ಕಾರಣತ್ವಾಲ್ಲಣೀಶ್ವರಃ ॥ ೧೭

ಎಲ್ಲ ಪ್ರಾಣಿಗಳಿಗೆ, ಉದ್ಭಿಜವೆನಿಸಿದ ಗಿಡ ಮರ ಬಳ್ಳಿಗಳಿಗೆ, ಸ್ವೇದಜ, ಜರಾಯುಜ, ಅಂಡಜ ಮೊದಲಾದವುಗಳಿಗೆಲ್ಲ ಮುಖ್ಯ ಆಧಾರವಾಗಿರುವ ಪೃಥವಿಯು ಲಕಾರದಿಂದ ಜನಿಸಿತು. "ಅನ್ನಾದ್ರೇತಃ" ಎಂಬ ಶ್ರುತಿ ಇದನ್ನು ಸಮರ್ಥಿಸುತ್ತದೆ.

## ಪಂಚತನ್ಮಾತ್ರಗಳ ಉತ್ಪತ್ತಿ

ಮುಂದಿನ ಸೂತ್ರವು ಈ ಐದು ಭೂತಗಳಿಗೆ ಅಸಾಧಾರಣ ಗುಣಗಳಾಗಿರುವ ತನ್ಮಾತ್ರಗಳು ಪರಶಿವನಿಂದ ಉದಿಸಿದವು ಎಂದು ಹೇಳುತ್ತದೆ.

ಞ ಮ ಙ ಣ ನ ಮ್ ॥ ೭ ॥

ಶಬ್ದಸ್ಪರ್ಶರೂಪರಸಗಂಧಾಶ್ಚ ಞಮಙಣನಮ್ ।
ವ್ಯೋಮಾದೀನಾಂ ಗುಣಾಹ್ಯೇತೇ ಜಾನೀಯಾತ್ಸರ್ವ ವಸ್ತುಷು ೧೮

ಈ ಸೂತ್ರದಲ್ಲಿರುವ ಞ ಕಾರದಿಂದ ಆಕಾಶದ ಗುಣ ಶಬ್ದ, ಮಕಾರದಿಂದ ವಾಯುವಿನ ಗುಣ ಸ್ಪರ್ಶ, ಙ್ ಕಾರದಿಂದ ಅಗ್ನಿಯ ಗುಣ ರೂಪ, ಣಕಾರದಿಂದ ಸಲಿಲದ ಗುಣ ರಸ, ನಕಾರದಿಂದ ಪೃಥಿವಿಯ ಗುಣ ಗಂಧ ಎಂಬ ಐದು ತನ್ಮಾತ್ರಗಳು ಉದಿಸಿದವು.

## ಕರ್ಮೇಂದ್ರಿಯಗಳ ಉತ್ಪತ್ತಿ

ಝಭಞ್ ॥ ೮ ॥

ವಾಕ್ಪಾಣೀ ಚ ಝಭಞಾ ಆಸೀದ್ವಿರಾಡ್ರೂಪ ಚಿದಾತ್ಮನಃ ।
ಸರ್ವಜಂತುಷು ವಿಜ್ಞೇಯಂ ಸ್ಥಾವರಾದೌ ನ ವಿದ್ಯತೇ ॥
ವರ್ಗಾಣಾಂ ತುರ್ಯವರ್ಣಾ ಯೇ ಕರ್ಮೇಂದ್ರಿಯಮಯಾ ಹಿ ತೇ ॥ ೧೯ ॥

ವಿರಾಡ್ರೂಪನಾದ ಚಿದಾತ್ಮನ ದೆಸೆಯಿಂದ ಸ್ಥಾವರಗಳ ಹೊರತು ಉಳಿದ ಎಲ್ಲ ಪ್ರಾಣಿಗಳ ಮುಖ್ಯಕರ್ಮೇಂದ್ರಿಯಗಳೆನಿಸಿರುವ ವಾಕ್-ಪಾಣಿ ತತ್ತ್ವಗಳು, ಚವರ್ಗ ಮತ್ತು ಪವರ್ಗಗಳ ನಾಲ್ಕನೆಯ ವರ್ಣಗಳಾದ ಝ-ಭ ಗಳಿಂದ ಕ್ರಮವಾಗಿ ಹುಟ್ಟಿದವು.

ಮುಂದಿನ ಸೂತ್ರವು ಕರ್ಮೇಂದ್ರಿಯಗಳಲ್ಲಿ ಉಳಿದವುಗಳ ಉತ್ಪತ್ತಿಯನ್ನು ಹೇಳುತ್ತದೆ.

ಘ ಢ ಧ ಷ್ ॥ ೯ ॥

ಘ ಢ ಧ ಷ್ ಸರ್ವಭೂತಾನಾಂ ಪಾದಪಾಯೂ ಉಪಸ್ಥಕಃ ।
ಕರ್ಮೇಂದ್ರಿಯ ಗಣಾಹ್ಯೇತೇ ಜಾತಾ ಹಿ ಪರಮಾರ್ಥತಃ ॥ ೨೦ ॥

ಇಲ್ಲಿ ಘಕಾರದಿಂದ ಪಾದತತ್ತ್ವ, ಢಕಾರದಿಂದ ಪಾಯುತತ್ತ್ವ, ಧಕಾರದಿಂದ ಉಪಸ್ಥತತ್ತ್ವ, ಎಂಬ ಕರ್ಮೇಂದ್ರಿಯಗಳು ಉದಿಸಿದವು.

## ಜ್ಞಾನೇಂದ್ರಿಯಗಳ ಉತ್ಪತ್ತಿ

ಮುಂದಿನ ಸೂತ್ರವು ಜ್ಞಾನೇಂದ್ರಿಯಗಳ ಉತ್ಪತ್ತಿಯನ್ನು ಹೇಳುತ್ತದೆ.

ಜ ಬ ಗ ಡ ದ ಶ್ ॥ ೧೦ ॥

ಶ್ರೋತ್ರಸ್ತ್ವ ನಯನ-ಘ್ರಾಣ ಜಿಹ್ವಾದೀಂದ್ರಿಯಪಂಚಕಮ್ ।
ಸರ್ವೇಷಾಮಪಿ ಜಂತೂನಾಮೀರಿತಂ ಜ ಬ ಗ ಡ ದ ಶ್ ॥ ೨೧ ॥
ವರ್ಗಾಣಾಂ ಮಧ್ಯವರ್ಣೋತ್ಥಾ ಜ್ಞಾನೇಂದ್ರಿಯಗಣಾ ಸ್ಮೃತಾಃ ॥

ಎಂಬಂತೆ ಐದೂ ವರ್ಗಗಳ ಮಧ್ಯಮ ವರ್ಣಗಳೆನಿಸಿರುವ ಜ–ಬ–ಗ–ಡ–ದ ಎಂಬ ಐದು ವರ್ಣ ಮೂರ್ತಿಯಾದ ಪರಶಿವನ ದೆಶೆಯಿಂದ ಕ್ರಮವಾಗಿ ಶ್ರೋತ್ರ, ತ್ವಕ್, ನಯನ, ಘ್ರಾಣ ಮತ್ತು ಜಿಹ್ವೆ ಎಂಬ ಜ್ಞಾನೇಂದ್ರಿಯಗಳು ಜನಿಸಿದವು

## ಪಂಚಪ್ರಾಣಾದಿಗಳು

ಖ ಫ ಛ ಠ ಥ ಚ ಟ ತ ವ್ ॥ ೧೧ ॥

ಪ್ರಾಣಾದಿಪಂಚಕಂಚೈವ ಮನೋಬುದ್ಧಿರಹಂಕೃತಿಃ ।
ಬಭೂವ ಕಾರಣತ್ವೇನ ಖ ಫ ಛ ಠ ಥ ಚ ಟ ತ ವ್ ॥ ೨೨ ॥

ವರ್ಗಗಳ ಎರಡನೆಯ ಮಹಾಪ್ರಾಣಗಳೆಸಿರುವ ಖ-ಘ-ಛ-ಠ-ಥ ಎಂಬ ಐದು ವರ್ಣರೂಪ ಪರಶಿವನಿಂದ ಪ್ರಾಣ-ಅಪಾನ-ವ್ಯಾನ-ಉದಾನ-ಸಮಾನ ಎಂಬ ಪಂಚಪ್ರಾಣಗಳೂ, ಚ-ಟ-ತ ಎಂಬ ವರ್ಣತ್ರಯರೂಪ ಶಿವನಿಂದ ಕ್ರಮವಾಗಿ ಮನಸ್ಸು-ಬುದ್ಧಿ-ಅಹಂಕಾರವೆಂಬ ಮೂರು ತತ್ತ್ವಗಳೂ ಹುಟ್ಟಿದವು.

ವರ್ಗದ್ವಿತೀಯವರ್ಣೋತ್ಥಾಃ ಪ್ರಾಣಾದ್ಯಾಃ ಪಂಚವಾಯವಃ ।
ವರ್ಗಮಧ್ಯ ತ್ರಯಾ ಜ್ಞಾತಾ ಅಂತಃಕರಣ ವೃತ್ತಯಃ ॥ ೨೩ ॥

ವರ್ಗಗಳ ಎರಡನೆಯ ವರ್ಣಗಳಾದ ಮಹಾಪ್ರಾಣಾಕ್ಷರಗಳಿಂದ ಮೇಲೆ ಹೇಳಿದ ಪಂಚಪ್ರಾಣಗಳೂ, ಮಧ್ಯದ ಮೂರು ವರ್ಗಗಳ ಮೊದಲ ವರ್ಣಗಳಿಂದ ಅಂತಃಕರಣಗಳೂ ಜನಿಸಿದವು.

## ಪ್ರಕೃತಿ-ಪುರುಷ

ಎಲ್ಲ ವಿಧವಾದ ಭೂತಪಂಚಕ, ತನ್ಮಾತ್ರಾಪಂಚಕ, ಕರ್ಮೇಂದ್ರಿಯ ಮತ್ತು ಜ್ಞಾನೇಂದ್ರಿಯಪಂಚಕಗಳೆಂಬ ಇಪ್ಪತ್ತು ತತ್ತ್ವಗಳು ಹಾಗೂ ಮನಸ್ಸು ಬುದ್ಧಿ ಮತ್ತು ಅಹಂಕಾರವೆಂಬ ಇಪ್ಪತ್ತುಮೂರು ತತ್ತ್ವಗಳಿಗೆ ಮೂಲವೆನಿಸಿರುವ ಪ್ರಕೃತಿ-ಪುರುಷ ತತ್ತ್ವಗಳ ಉತ್ಪತ್ತಿಯನ್ನು ಮುಂದಿನ ಸೂತ್ರವು ನಿರ್ದೇಶಿಸುತ್ತದೆ.

ಕ ಪ ಯ್ ॥ ೧೨ ॥

ಪ್ರಕೃತಿಃ ಪುರುಷಶ್ಚೈವ ಸರ್ವೇಷಾಮೇವ ಸಮ್ಮತಾ ।
ಸಂಭೂತಾವಿತಿ ವಿಜ್ಞೇಯಂ ಕಪಯ್‌ಸ್ಯಾದಿತಿ ನಿಶ್ಚಿತಮ್ ॥ ೨೪ ॥

ವರ್ಗಗಳ ಮೊದಲನೆಯ ಕವರ್ಗದ ಮೊದಲನೆಯ ಕಕಾರದಿಂದ ಪ್ರಕೃತಿ ತತ್ತ್ವವೂ ಕಡೆಯ ಪವರ್ಗದ ಮೊದಲ ಪಕಾರದಿಂದ ಪುರುಷ ತತ್ತ್ವವೂ ಉದಿಸಿದವು. ಇಲ್ಲಿ ಎಲ್ಲ ಪ್ರಾಣಿಗಳಿಗೆ ಕಾರಣವಾಗಿರುವ ಆದಿ ಮತ್ತು ಅಂತ್ಯ ವರ್ಗಗಳ ಮೊದಲ ವರ್ಣಗಳೆರಡನ್ನು ಗ್ರಹಿಸಿರುವುದರಿಂದ ಪ್ರಕೃತಿ-ಪುರುಷರ ಸಂಪುಟೀಭಾವವು ವ್ಯಕ್ತವಾಗುತ್ತದೆ. ನಂದಿಕೇಶ್ವರನ ಈ ಇಪ್ಪತ್ತು ನಾಲ್ಕು ಕಾರಿಕೆಗಳಲ್ಲಿ ಶಿವಾಗಮ ಪ್ರಸಿದ್ಧವಾದ ಮೂವತ್ತಾರು ತತ್ತ್ವಗಳು ಸಂಗ್ರಹಿಸಲ್ಪಟ್ಟಿವೆ.

## ಗುಣತ್ರಯ

ಶ ಷ ಸ ರ್ ॥ ೧೩ ॥

ಸತ್ತ್ವಂ ರಜಸ್ತಮ ಇತಿ ಗುಣಾನಾಂ ತ್ರಿತಯಂ ಪುರಾ ।
ಸಮಾಶ್ರಿತ್ಯ ಮಹಾದೇವಃ ಶಷಸರ್ ಕ್ರೀಡತಿ ಪ್ರಭುಃ । ೨೫ ।
ಶಕಾರಾದ್ರಾಜಸೋತ್ಪತ್ತಿಃ ಷಕಾರಾತ್ತಾಮಸೋದ್ಭವಃ ।
ಸಕಾರಾತ್ಸತ್ತ್ವ ಸಂಭೂತಿರಿತಿ ತ್ರಿಗುಣಸಂಭವ; । ೨೬ ।

ಸೃಷ್ಟಿಗೆ ಮೊದಲು ಸತ್ತ್ವ–ರಜಸ್ಸು–ತಮಸ್ಸು ಎಂಬ ಮೂರು ಗುಣಗಳನ್ನು ಆಶ್ರಯಿಸಿ ಪ್ರಭುವಾದ ಪರಶಿವನು ಶ-ಷ-ಸ ಎಂಬ ವರ್ಣಗಳಿಂದ ಕ್ರಮವಾಗಿ ರಜಸ್ಸು–ತಮಸ್ಸು ಮತ್ತು ಸತ್ತ್ವಗುಣಗಳನ್ನು ಆಶ್ರಯಿಸಿ ಎಲ್ಲ ಭೂತಗಳಲ್ಲಿಯೂ ಕ್ರೀಡಿಸುತ್ತಿದ್ದಾನೆ.

## ಅಹಂ ಪರಬ್ರಹ್ಮ

ಹೀಗೆ ಗುಣತ್ರಯವನ್ನು ಆಶ್ರಯಿಸಿ ಎಲ್ಲ ಭೂತಗಳಲ್ಲಿ ಕ್ರೀಡಿಸುತ್ತಿದ್ದರೂ ಸಹ ಪರಶಿವನು " ವಿಶ್ವಾಧಿಕೋ ರುದ್ರೋ ಮಹರ್ಷಿಃ " ಎಂಬ ಶ್ರುತಿಯಂತೆ ಸರ್ವ ತತ್ತ್ವಜನಕನಾಗಿದ್ದರೂ ಕೂಡ ಅವನು ತತ್ತ್ವಾತೀತನಾಗಿರುವನೆಂಬುದನ್ನು ಕಡೆಯ ಸೂತ್ರವು ಸೂಚಿಸುತ್ತದೆ.

ಹಲ್ ॥ ೧೪ ॥

ತತ್ತ್ವಾತೀತಃ ಪರಃಸ್ಸಾಕ್ಷೀ ಸರ್ವಾನುಗ್ರಹ ವಿಗ್ರಹಃ ।
ಅಹಮಾತ್ಮಾ ಪರೋ ಹಲ್ ಸ್ಯಾಮಿತಿ ಶಂಭುಸ್ತಿರೋದಧೇ । ೨೭ ।

ಹೀಗೆ ಪರಶಿವನು ತನ್ನ ಲೀಲೆಗಾಗಿ ತನ್ನಲ್ಲಿ ಸೂಕ್ಷ್ಮರೂಪದಿಂದ ಅಡಗಿದ್ದ ಈ ವಿಶ್ವವನ್ನು ತನ್ನಲ್ಲಿಯೇ ಅನನ್ಯವೆನಿಸಿರುವ ಚಿಚ್ಛಕ್ತಿಯ ಸಹಾಯದಿಂದ ಮೂವತ್ತಾರು ತತ್ತ್ವಾತ್ಮಕವಾಗಿ ವಿಸ್ತರಿಸಿದನು. ಅನಂತರ ಆ ವಿಶ್ವದಲ್ಲಿ ತಾನೇ ಸೇರಿ ಸತ್ತ್ವರಜಸ್ತಮೋ ಗುಣಗಳ ಮೂಲಕ ಬೇಕಾದ ಹಾಗೆ ಕ್ರೀಡಿಸಿದನು. ತರುವಾಯ ಅವನು ತತ್ತ್ವಾತೀತನಾದ್ದರಿಂದ ವಿಶ್ವದಲ್ಲಿ ಇದ್ದೂ ಇಲ್ಲದಂತೆ ಈ ಚರಾಚರಾತ್ಮಕವಾದ ಜಗತ್ತಿಗೆ ಪರನೂ ಸಾಕ್ಷಿಭೂತನೂ "ಅಹಂ" ಪದ

ವಾಚ್ಯನೂ ಆಗಿ ಅರ್ಹರಾದ ಎಲ್ಲ ಸಾಧಕರನ್ನು ಅನುಗ್ರಹಿಸುವೆನು ಎಂದು ಅಭಯವಿತ್ತು ಅಂತರ್ಧಾನನಾದನು.

ಹೀಗೆ ಪರಶಿವನ ನೃತ್ಯಾವಸಾನದಲ್ಲಿ ಸನಕಾದಿ ಮಹರ್ಷಿಗಳ ಪ್ರಾರ್ಥನೆಯಂತೆ ಹದಿನಾಲ್ಕುಸಲ ನುಡಿಸಿದ ಡಮರುಗದಿಂದ ಧ್ವನಿಸಿದ ಮಾಹೇಶ್ವರ ಸೂತ್ರಗಳು ಮೊದಲೇ ಹೇಳಿದಂತೆ ವಾಕ್‌ಜ್ಞಾನಕಕ್ಕಾಗಿಯೂ ಬ್ರಹ್ಮಬೋಧಕವಾಗಿಯೂ ಇವೆ. ಈ ಗುಟ್ಟನ್ನು ಗಮನಿಸಿಯೇ ನಂದಿಕೇಶ್ವರ ಶಿವಾಚಾರ್ಯ ಆ ಸೂತ್ರಗಳ ರಹಸ್ಯಾರ್ಥವನ್ನು ತನ್ನ ಕಾರಿಕೆಗಳ ಮೂಲಕ ಲೋಕಹಿತಾರ್ಥವಾಗಿ ಪ್ರಕಾಶಪಡಿಸಿದನು.

ಆದುದರಿಂದ ನಾವು ನುಡಿವ ಮಾತು ಶಿವ-ಶಕ್ತಿಸ್ವರೂಪ. ಇದನ್ನೇ ವೈಯಾಕರಣರ 'ಶಬ್ದಬ್ರಹ್ಮ' ವೆಂದರೆ ಶಿವಶರಣರು "ಮಾತೆಂಬುದು ಜ್ಯೋತಿರ್ಲಿಂಗ" ವೆಂದರು. ಇದು ಮಾತಿನ ಇತಿಮಿತಿಗಳನ್ನು ಸೂಚಿಸುತ್ತದೆ.

ಶೈವದಾರ್ಶನಿಕರು ಶಕ್ತಿವಿಶಿಷ್ಟ ಪರಶಿವನಿಂದ ಜನಿಸಿದ ಜಗತ್ತಿಗೆ ಮೂಲವಾದ ಮೂವತ್ತಾರು ತತ್ತ್ವಗಳ ಆಧಾರದ ಮೇಲೆ ತಮ್ಮ ಸಿದ್ಧಾಂತಗಳ ಸೌಧಗಳನ್ನು ನಿರ್ಮಿಸಿದ್ದಾರೆ. ಇದನ್ನು ಮನಗಂಡವನಾದ್ದರಿಂದಲೇ ಆಚಾರ್ಯ ಭೋಜದೇವನು ಈ ಮೂವತ್ತಾರು ತತ್ತ್ವಗಳ ಸ್ವರೂಪವನ್ನು ತನ್ನ ತತ್ತ್ವಪ್ರಕಾಶಿಕೆಯಲ್ಲಿ ಸುಂದರವಾಗಿ ನಿರೂಪಿಸಿ ಮಹೋಪಕಾರ ಮಾಡಿದ್ದಾನೆ. ತತ್ತ್ವಜಿಜ್ಞಾಸುಗಳು ಇದನ್ನು ಸಾವಧಾನವಾಗಿ ಮನನ ಮಾಡಬೇಕೆಂದು ಬೇರೆ ಹೇಳಬೇಕಾಗಿಲ್ಲ.

ಎಂ. ಜಿ. ನಂಜುಂಡಾರಾಧ್ಯ

# ಪರಿವಿಡಿ

## ಪ್ರಥಮ ಪರಿಚ್ಛೇದ



## ದ್ವಿತೀಯ ಪರಿಚ್ಛೇದ

ತೃತೀಯ ಪರಿಚ್ಛೇದ

ಚತುರ್ಥ ಪರಿಚ್ಛೇದ



ಪಂಚಮ ಪರಿಚ್ಛೇದ

## ಷಷ್ಠ ಪರಿಚ್ಛೇದ

ಭೋಜದೇವ ವಿರಚಿತ

# ತತ್ತ್ವ ಪ್ರಕಾಶ

## ಪ್ರಥಮ ಪರಿಚ್ಛೇದ

ಆಚಾರ್ಯಭೋಜದೇವನು ಶೈವಸಿದ್ಧಾಂತ ಶಾಸ್ತ್ರವನ್ನು ಪ್ರಕರಣವಾಗಿ ನಿರೂಪಿಸಲೆಳಸಿ, ಆ ಪ್ರಕರಣವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗಲು ಶೈವಸಿದ್ಧಾಂತ ಶಾಸ್ತ್ರಕ್ಕೆ ಕಾರಣನೂ, ಸಮಸ್ತ ತತ್ತ್ವಾತೀತನೂ, ನಿಷ್ಕಲನೂ ಆದ ಪರಶಿವನನ್ನು ತನ್ನ ಕೃತಿಯ ಪ್ರಾರಂಭದಲ್ಲಿ ಸ್ತುತಿಸುತ್ತಿದ್ದಾನೆ.

ಚಿದ್ಘನ ಏಕೋ ವ್ಯಾಪೀ
ನಿತ್ಯಃ ಸತತೋದಿತಃ ಪ್ರಭುಃ ಶಾನ್ತಃ ।
ಜಯತಿ ಜಗದೇಕ ಬೀಜಂ
ಸರ್ವಾನುಗ್ರಾಹಕಃ ಶಂಭುಃ ॥ ೧ ॥

(ಚಿದ್ಘನಃ) ಜ್ಞಾನಕ್ರಿಯಾ ರೂಪವಾದ ಶಕ್ತಿಯೇ ಸ್ವರೂಪವಾಗಿ ಉಳ್ಳವನೂ (ಏಕಃ) ಅದ್ವಿತೀಯನೂ (ವ್ಯಾಪೀ) ಸರ್ವಗತನೂ (ನಿತ್ಯಃ) ಅಳಿವಿಲ್ಲದವನೂ (ಸತತೋದಿತಃ) ನಿತ್ಯಮುಕ್ತನೂ (ಪ್ರಭುಃ) ಸ್ವತಂತ್ರ ಕರ್ತನೂ (ಶಾಂತಃ) ರಾಗದ್ವೇಷಾದಿಗಳಿಲ್ಲದವನೂ (ಜಗದೇಕಬೀಜಂ) ಜಗತ್ತಿಗೆ ನಿಮಿತ್ತಕಾರಣನೂ (ಸರ್ವಾನುಗ್ರಾಹಕಃ) ಎಲ್ಲರನ್ನೂ ಅನುಗ್ರಹಿಸುವವನೂ ಆದ (ಶಂಭುಃ) ಮಂಗಳಕರನಾದ ಪರಮೇಶ್ವರನು (ಜಯತಿ) ಸರ್ವೋತ್ಕೃಷ್ಟನಾಗಿದ್ದಾನೆ.

ವಿಚಾರ—ಇಲ್ಲಿ ಚಿತ್ ಎಂಬುದು ಜ್ಞಾನ ಮತ್ತು ಕ್ರಿಯೆಗಳೆರಡಕ್ಕೂ ಉಪಲಕ್ಷಣ. "ಚೈತನ್ಯಂ ದೃಕ್‌ಕ್ರಿಯಾರೂಪಂ" ಎಂದು ಮೃಗೇಂದ್ರವು ಸಮರ್ಥಿಸಿದೆ. "ಚಿದೇವ ಘನಂ ದೇಹಃ ಯಸ್ಯಸಃ ಚಿದ್ಘನಃ"

ಎಂದರೆ ಚೈತನ್ಯಘನ, ಚೈತನ್ಯಸಾರ, ಚಿನ್ಮಾತ್ರ ಎಂದು ತಾತ್ಪರ್ಯ. 'ಆದ್ಯಂತರಹಿತಂ ಶುದ್ಧಂ ಚಿದಾನಂದಮಯಂ ಶಿವಂ' ಎಂದು ಸ್ಮರಿಸಲಾಗಿದೆ. ಆದ್ದರಿಂದ ಕಾಲ ಕರ್ಮ ಮೊದಲಾದುವನ್ನು ಈಶ್ವರನೆಂದು ಹೇಳುವವರ ಮತದಂತೆ ಅವನು ಜಡನಲ್ಲ. ಅಚೇತನಕ್ಕೆ ಚೇತನದ ಅಧಿಷ್ಠಾನವಿಲ್ಲದೆ ಪ್ರವೃತ್ತಿಯುಂಟಾಗುವುದಿಲ್ಲ. ಇನ್ನು ಅವನಿಗೆ ಬೈಂದವ ಶರೀರವನ್ನು ಒಪ್ಪುವುದಕ್ಕೂ ಆಗುವುದಿಲ್ಲ. ಏಕೆಂದರೆ ಹಾಗೆ ಒಪ್ಪಿದರೆ ಅನೀಶ್ವರತ್ವ (ಈಶ್ವರನೇ ಇಲ್ಲ) ಪ್ರಸಂಗವುಂಟಾಗುತ್ತದೆ. ಆತನಿಗೆ ಮತ್ತೊಬ್ಬ ಕರ್ತೃವನ್ನು ಒಪ್ಪಿದರೆ ಅನವಸ್ಥೆ* ಎಂಬ ದೋಷ ಬರುತ್ತದೆ.

ಏಕಃ—ಅದ್ವಿತೀಯ, 'ಏಕಮೇವಾದ್ವಿತೀಯಂ ಬ್ರಹ್ಮ" "ಅಹಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ" "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥುಃ "(ಶ್ವೇತಾಶ್ವತರ) 'ಸರ್ವೋ ವೈ ರುದ್ರಃ" ಮುಂತಾದ ಶ್ರುತಿವಚನಗಳು ಶಿವನ ಏಕತ್ವವನ್ನು ಪ್ರತಿಪಾದಿಸಿವೆ. ಆದ್ದರಿಂದ ಅನೇಕ ಈಶ್ವರರನ್ನು ಹೇಳುವುದಕ್ಕಾಗುವುದಿಲ್ಲ. "ಬಹವೋ ಯತ್ರ ನೇತಾರಃ ಸರ್ವೇ ಪಂಡಿತಮಾನಿನಃ । ತಥಾ ಮಹತ್ವಮಿಚ್ಛಂತಿ ತದ್ವ್ಯಕ್ತಮವಸೀದತಿ" ಎಂಬ ಉಕ್ತಿಯಂತೆ ಅನೇಕ ಕರ್ತೃಗಳು ನಿರ್ಮಿಸುವ ರಥ, ಗೋಪುರ ಮೊದಲಾದವುಗಳಲ್ಲಿಯೂ ಕೂಡ ಒಬ್ಬನ ಅಭಿಪ್ರಾಯಕ್ಕೆ ಮನ್ನಣೆಯು ಇಲ್ಲದ ಪಕ್ಷದಲ್ಲಿ ಅದು ಸಮರ್ಪಕವಾಗುವುದಿಲ್ಲ. ವ್ಯಾಪೀ—'ವ್ಯಾಪ್ನೋತಿ ಸ್ಯಾಸ್ತೀತಿ ವ್ಯಾಪೀ—ಸರ್ವಗತ ಎಂದು ಅರ್ಥ. 'ಅಗತ್ವಾ ಸರ್ವಮೂರ್ತ ಸಂಯೋಗಿತ್ವಂ ಸರ್ವಗತತ್ವಂ' ಎಂದರೆ ಗಮನವಿಲ್ಲದೆಯೇ ಗಗನದಂತೆ ಎಲ್ಲೆಡೆಯೂ ಇರುವುದರಿಂದ 'ಆಕಾಶವತ್ಸರ್ವಗತಶ್ಚನಿತ್ಯಃ' 'ಸ ಹಿ ಸರ್ವೇಷು ಭೂತೇಷು ಸ್ಥಾವರೇಷು ಚರೇಷು ಚ। ವಸತ್ಯೇಕೋ ಮಹಾವೀರ್ಯೋ ನಾನಾ ಭಾರಸಮನ್ವಿತಃ" ಎಂದು ಶಿವನ ಸರ್ವಗತತ್ವವನ್ನು ಶ್ರುತಿಗಳು ಸಾರಿವೆ. ಹಾಗಾದರೆ ಅವನು ಆಕಾಶದಂತೆ ಜಡನೆ ? ಎಂದರೆ ಆಗ ಶಿವನಿಗೆ

---

*ಅಪ್ರಾಮಾಣಿಕಾನಂತ ಪದಾರ್ಥಕಲ್ಪನಾ ವಿಶ್ರಾಂತ್ಯಭಾವಃ ಅನವಸ್ಥಾ ಎಂದರೆ—ಅಪ್ರಾಮಾಣಿಕವಾದ ಅನೇಕ ಪದಾರ್ಥಗಳನ್ನು ಕಲ್ಪಿಸುವಲ್ಲಿ ಕೊನೆಯೇ ಇಲ್ಲದಿರುವಿಕೆ. ಉದಾ:—ಬೀಜವೃಕ್ಷನ್ಯಾಯ.

ಚಿದ್ರೂಪತ್ವವನ್ನು ಹೇಳಿರುವ ಶ್ರುತಿಗಳಿಗೆ ವಿರೋಧ ಬರುತ್ತದೆ. ಆದ್ದರಿಂದ ಅವನು ಜೈನರು, ಹೇಳುವಂತೆ ಶರೀರ ಪರಿಮಿತನೂ, ಸಂಕೋಚ ಮತ್ತು ವಿಕಾಸ ಧರ್ಮವುಳ್ಳವನೂ ಅಲ್ಲ. ಹಾಗೆ ಹೇಳಿದರೆ ಅಂಥವನಿಗೆ ಅಚೇತನತ್ವ, ಅನೀಶ್ವರತ್ವ ಮುಂತಾದ ದೋಷಗಳು ಸಿದ್ಧ. ನಿತ್ಯಃ—ಆದ್ಯಂತರಹಿತ, ಅವಿನಾಶಿ ಎಂದು ಅರ್ಥ. 'ಕ್ಷರಂ ಪ್ರಧಾನಮಮೃತಾಕ್ಷರಂ ಹರಃ' (ಶ್ವೇತಾಶ್ವತರ) 'ಸರ್ವೇಷು ಕಾಲೇಷ್ವನುಸಂತತಾತ್ಮಾ' ಅಂದರೆ ಭೂತ, ಭವಿಷ್ಯತ್ ಮತ್ತು ವರ್ತಮಾನ ಎಂಬ ಎಲ್ಲ ಕಾಲಗಳಲ್ಲಿಯೂ ಇರುವವನು ಎಂದು ಅರ್ಥ. ಬೌದ್ಧರು ಹೇಳುವಂತೆ ಅವನು ಕ್ಷಣಿಕನೂ ಅಲ್ಲ. 'ಉತ್ಪತ್ತಿ ಕಾಲದಲ್ಲಿಯೇ ನಾಶಹೊಂದುವುದು ಕ್ಷಣಿಕತ್ವ. ಅಂದಮೇಲೆ ಅದು ಜಗತ್ಕರ್ತೃ ಹೇಗಾದೀತು ? 'ಸತತೋದಿತಃ'—'ಸತತಂ ಸರ್ವದಾ ಉದಯಃ ಪ್ರಕಾಶೋ ಯಸ್ಯಾಸೌ ಸತತೋದಿತಃ' ಎಂದರೆ ಉದಯ ಮತ್ತು ಅಸ್ತಮಾನಗಳಿಲ್ಲದ ಪ್ರಕಾಶವುಳ್ಳವನು, 'ಸ್ವಯಂ ಪ್ರಕಾಶ' 'ಅತ್ರಾಯಂ ಪುರುಷಃ ಸ್ವಯಂಜ್ಯೋತಿಃ' ಎಂದು ಶ್ರುತಿ ಸಾರಿದೆ. ಆದ್ದರಿಂದ ಅವನು ನಿತ್ಯಮುಕ್ತ. ಮುಕ್ತಾತ್ಮರಿಗೆ ಮತ್ತೊಬ್ಬ ಈಶ್ವರನ ಪ್ರಸಾದದಿಂದ ಮುಕ್ತಿ. ನಿತ್ಯಮುಕ್ತನಿಗೆ ಅಂಥ ಪ್ರಸಂಗವಿಲ್ಲ. ಪ್ರಭುಃ—ಉಪಕರಣ ಮೊದಲಾದವುಗಳಿಲ್ಲದೆ ಸಕಲ ಕಾರ್ಯಜನಕತ್ವವೇ ಪ್ರಭುತ್ವ. 'ಯಥಾಮಣಿರಯಸ್ಕಾಂತಸಾನ್ನಿಧ್ಯಾದುಪಕಾರಕಃ । ಅಯಸಶ್ಚಲಿತಸ್ತದ್ವಚ್ಚಿವೋಽಪ್ಯಸ್ಯೇತಿ ಸೂರಯಃ ॥ ಯಥಾ ಸನ್ನಿಧಿಮಾತ್ರೇಣ ಗಂಧಃ ಕ್ಷೋಭಾಯ ಜಾಯತೇ । ಮನಸೋ ನೋಪಕರ್ತೃತ್ವಾತ್ ತಥಾಸೌ ಪರಮೇಶ್ವರಃ' ಎಂಬ ಆಗಮ ವಾಕ್ಯದಂತೆ ಆತನ ಪ್ರಭುತ್ವ. ಶಾಂತಃ—ರಾಗದ್ವೇಷಾದಿಗಳಿಲ್ಲದವನು. "ಮೋಹೋ ಮದಶ್ಚರಾಗಶ್ಚ ವಿಷಾದಶ್ಯೋಷ ಏವ ಚ । ವೈಚಿತ್ರ್ಯಂ ಚೈವ ಹರ್ಷಶ್ಚ ಸಪ್ತೈತೇ ಸಹಜಾ ಮಲಾಃ ॥" ಇವುಗಳು ಮಲಗಳು. ಅವುಗಳಿಗೆ ಕಾರಣನಾದವನಿಗೆ ಮಲಸಂಪರ್ಕವಿಲ್ಲವೆಂದು ತಾತ್ಪರ್ಯ. ಮೇಲೆ ಕಂಡ ಲಕ್ಷಣಗಳಿಂದ ಕೂಡಿದ ಒಬ್ಬ ಈಶ್ವರನು ಉಂಟೆ ? ಎಂದರೆ ಉಂಟು ಎಂಬುದನ್ನು 'ಜಗದೇಕಬೀಜಂ' ಎಂಬ ವಿಶೇಷಣದಿಂದ ಸಿದ್ಧಮಾಡುತ್ತಾನೆ. 'ಜಗತಃ ಕಾಲಾದೇಃ ಕಾರ್ಯಜಾತಸ್ಯ ಏಕಂ ಪ್ರಧಾನಂ ಬೀಜಂ ಕಾರಣಂ' ಎಂದರೆ ಮೂಲಕಾರಣನು ಎಂದು ಅರ್ಥ

ಅಥವಾ 'ಜಗತಾಮೇಕಃ ಕರ್ತಾ ಚ ಬೀಜಮುಪಾದಾನಂ ಚ' ಇಲ್ಲವೆ ನಿಮಿತ್ತ ಮತ್ತು ಉಪಾದಾನನಾದವನು ಎಂದು ಅರ್ಥ. ಜಗದೇಕಬೀಜಂ–ಜಗತ್ತಿಗೆ ನಿಮಿತ್ತ ಕಾರಣನು, ಎಂದರೆ ಅನೇಕ ಸನ್ನಿವೇಶಗಳಿಂದ 'ಜಗತ್ತು ಕಾರ್ಯ' ಎಂದು ನಿರ್ಧರಿಸಿಕೊಂಡರೆ, ಆ ಕಾರ್ಯಕ್ಕೆ ಒಂದು ನಿಮಿತ್ತ ಕಾರಣವಿರ ಬೇಕು. ಉದಾಹರಣೆ :—ಘಟ (ಕಾರ್ಯ) ವನ್ನು ನೋಡಿ ಕುಂಬಾರ (ಕಾರಣ)ನನ್ನು ಊಹಿಸುವಂತೆ. 'ಯದ್ಯತ್ ಸಾವಯಂ ತತ್ತತ್ ಕಾರ್ಯಂ; ಯದ್ಯತ್ ಕಾರ್ಯಂ ತತ್ತತ್ ಸಕರ್ತೃಕಂ' ಎಂಬ ನ್ಯಾಯದಂತೆ 'ವಿವಾದಾಧ್ಯಾಸಿತಂ ವಿಶ್ವಂ ವಿಶ್ವವಿತ್ಕರ್ತೃ ಪೂರ್ವಕಂ। ಕಾರ್ಯತ್ವಾದಾವಯೋಸ್ಸಿದ್ಧಂ ಕಾರ್ಯಂ ಕುಂಭಾದಿಕಂ ಯಥಾ ॥ ಎಂದು ಸಮರ್ಥಿಸಲಾಗಿದೆ. ಮತಂಗಾಗಮದಲ್ಲಿಯೂ ಕೂಡ 'ನಿಮಿತ್ತಕಾರಣಂ ತ್ವೀಶಃ' ಎಂದು ಹೇಳಿದೆ. 'ಸರ್ವಾನುಗ್ರಾಹಕಃ'—ಎಂಬಲ್ಲಿ 'ಅನುಗ್ರಹ' ಎಂಬುದು ಈಶ್ವರನ ಪಂಚ ಕೃತ್ಯಗಳಲ್ಲಿ ಕಡೆಯದು. ಅದು ಉಳಿದ ನಾಲ್ಕಕ್ಕೆ ಉಪಲಕ್ಷಣ. ಇದರಿಂದ ಶಿವನು ಸೃಷ್ಟಿ, ಸ್ಥಿತಿ, ಲಯ (ಸಂಹಾರ), ತಿರೋಧಾನ ಮತ್ತು ಅನುಗ್ರಹ ಗಳಿಂದ ಎಲ್ಲರಿಗೂ ಭೋಗ ಮೋಕ್ಷಗಳನ್ನು ನೀಡುವವನು ಎಂದು ಅರ್ಥ. ಅವನು ಸರ್ವಾತ್ಮಕನಾದ್ದರಿಂದಲೇ ಸರ್ವಜ್ಞ. 'ಸರ್ವಜ್ಞಃ ಸರ್ವಕರ್ತೃತ್ವಾತ್ ಸಾಧನಾಂಗಫಲೈಃ ಸಹ। ಯೋ ಯಜ್ಜಾನಾತಿ ಕುರುತೇ ಸ ತದೇವೇತಿ ಸುಸ್ಥಿತಮ್ ॥'

ಮೇಲೆ ಹೇಳಿದ ವಿಶೇಷಣಗಳಿಂದ ಕೂಡಿದ ಶಂಭುಃ—'ಶಂ ಸುಖಂ ತಸ್ಮಿನ್ ಭವತೀತಿ ಶಂಭುಃ' ಸ್ವಯಂ ಆನಂದಸ್ವರೂಪನಾದ ಪರಶಿವನು 'ಜಯತಿಃ'—ಸರ್ವೋತ್ಕೃಷ್ಟನಾಗಿದ್ದಾನೆ. ಆ ಸರ್ವೋತ್ಕರ್ಷತೆಯನ್ನು ಶ್ರುತಿ 'ಯಸ್ಮಾತ್ ಪರಂ ನಾಸ್ತಿ ನಾ ಪರಮಸ್ತಿ ಕಿಂಚತ್' 'ಅಣೋರಣೀಯಾನ್ ಮಹತೋಮಹೀಯಾನ್' ಎಂದು ವರ್ಣಿಸಿದೆ.

ಸರ್ವೇಂದ್ರಿಯೇಭ್ಯಃ ಪರಮಂ ಮನ ಆಹುರ್ಮನೀಷಿಣಃ ।
ಮನಸಶ್ಚಾಪ್ಯಹಂಕಾರಃ ಅಹಂಕಾರಾನ್ಮಹಾನ್‌ಪರಃ ॥
ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ
ಪುರುಷಾತ್ ಭಗವಾನ್ ಪ್ರಾಣಸ್ತಸ್ಯ ಸರ್ವಮಿದಂ ಜಗತ್ ॥
ಪ್ರಾಣಾತ್ ಪರತರಂ ವ್ಯೋಮ ವ್ಯೋಮಾತೀತೋಽಗ್ನಿರೀಶ್ವರಃ ॥

"ಈಶ್ವರಾನ್ನಪರಂ ಕಿಂಚಿತ್............"
ಎಂಬ ಶ್ರುತಿ ಇದೇ ಅರ್ಥವನ್ನು ಸಮರ್ಥಿಸಿದೆ.

ಹೀಗೆ ಧರ್ಮಿಸ್ವರೂಪನಾದ ಶಿವನನ್ನು ಸ್ತುತಿಸಿ, ಧರ್ಮಸ್ವರೂಪವಾಗಿರುವ ಆತನ ಶಕ್ತಿಯ ಲಯಾವಸ್ಥೆಯನ್ನು ಭಜಿಸುವ ನೆಪದಿಂದ ತತ್ಪ್ರಾಪ್ತಿಗೆ ಉಪಾಯಭೂತವೂ ಸಕಲ ನಿಷ್ಕಲಾತ್ಮಕವೂ ಆದ ತೇಜಸ್ಸನ್ನು ಜ್ಯೋತಿರ್ಲಿಂಗ ರೂಪದಿಂದ ಪ್ರಕಾಶಪಡಿಸುತ್ತಾನೆ.

ನೋದಯತಿ ಯನ್ನ ನಶ್ಯತಿ
ನಿರ್ವಾತಿ ನ[1] ನಿರ್ವೃತಿಂ ಪ್ರಯಚ್ಛತಿ ಚ ।
ಜ್ಞಾನಕ್ರಿಯಾಸ್ವಭಾವಂ
ತತ್ತೇಜಃ ಶಾಂಭವಂ ಜಯತಿ ॥ ೨ ॥

(ಯತ್) ಆ ಶಿವನ ಯಾವ ತೇಜಸ್ಸು (ನೋದಯತಿ) ಉತ್ಪತ್ತಿಯನ್ನು ಹೊಂದುವುದಿಲ್ಲ. (ನ ನಶ್ಯತಿ) ಕೆಡುವುದಿಲ್ಲ. (ನ ನಿರ್ವಾತಿ ಚ) ಯಾವುದರಿಂದಲೂ ಬಿಡಿಸಿಕೊಳ್ಳುವುದಿಲ್ಲ. ಮೇಲಾಗಿ ಅದು (ನಿರ್ವೃತಿಂ ಚ) ಮೋಕ್ಷವನ್ನು ಸಹ (ಪ್ರಯಚ್ಛತಿ) ಕೊಡಬಲ್ಲದು. ಅಂಥ (ಜ್ಞಾನಕ್ರಿಯಾ ಸ್ವಭಾವಂ) ಜ್ಞಾನ ಮತ್ತು ಕ್ರಿಯೆಗಳೇ ಸ್ವರೂಪವಾಗಿರುವ (ಶಾಂಭವಂ) ಪರಶಿವ ಸಂಬಂಧವಾದ ಮಂತ್ರಾತ್ಮಕ ವಿಗ್ರಹವುಳ್ಳ (ತತ್ತೇಜಃ) ಆ ಶಿವ ಸಾಮರ್ಥ್ಯವು (ಜಯತಿ) ಸರ್ವೋತ್ಕೃಷ್ಟದಿಂದ ವರ್ತಿಸುತ್ತಿರುವುದು.

ವಿಚಾರ—ಶಿವತೇಜಸ್ಸಿಗೆ ಉತ್ಪತ್ತಿ ವಿನಾಶಗಳಿಲ್ಲವೆಂದು ಹೇಳಿದ್ದರಿಂದ ಆ ತೇಜಸ್ಸಂಬಂಧಿಯಾದ ಜ್ಞಾನಕ್ಕೂ ಚೈತನ್ಯಾತ್ಮಕವಾದ ಶಿವ ತೇಜಸ್ಸಿಗೂ ಇರುವ ವ್ಯತ್ಯಾಸವನ್ನು ಹೇಳಿದಂತಾಯಿತು ಅಂದರೆ ಜಡವಾದ ಬೌದ್ಧಿಕ ಜ್ಞಾನಕ್ಕೆ ಉತ್ಪತ್ತಿವಿನಾಶಗಳು ಉಂಟು. ಶಿವತೇಜಸ್ಸಿಗೆ ಅವು ಇಲ್ಲ. ಒಂದುಪಕ್ಷ "ಚೈತನ್ಯಂ ದೃಕ್‌ಕ್ರಿಯಾರೂಪಂ ತದಸ್ತ್ಯಾತ್ಮನಿ ಸರ್ವದಾ" ಎಂದರೆ ದೃಕ್ಕ್ರಿಯಾರೂಪವಾದ ಚೈತನ್ಯವು ಜೀವಾತ್ಮನಲ್ಲಿಯೂ ಇದೆ. ಎಂದ ಮೇಲೆ ಜೀವಾತ್ಮನ ಸಾಮರ್ಥ್ಯಕ್ಕೂ ಶಿವಸಾಮರ್ಥ್ಯಕ್ಕೂ ಅಂತರವೇನು? ಎಂಬ ಸಂದೇಹವುಂಟಾದರೆ 'ನಿರ್ವಾತಿ ನ ನಿರ್ವೃತಿಂ ಪ್ರಯಚ್ಛತಿ" ಎಂಬ

---

[1] ಚ (ಖ)

ವಿಶೇಷಣವು ಅದಕ್ಕೆ ಸಮಾಧಾನ ನೀಡುತ್ತದೆ. ಎಂದರೆ ಆ ಶಿವತೇಜಸ್ಸು ಯಾರಿಂದಲೂ ಬಿಡುಗಡೆ (ಮೋಕ್ಷ) ಹೊಂದುವುದಿಲ್ಲ ; ಮಾತ್ರವಲ್ಲ. ಅದೇ ಜೀವಿಗಳಿಗೆ ಪಾಶವಿಮೋಚನ ಮಾಡುವುದರ ಮೂಲಕ ಮೋಕ್ಷವನ್ನೂ ನೀಡುತ್ತದೆ. ಇಂಥ ಸಾಮರ್ಥ್ಯವು ಆತ್ಮ (ಜೀವ) ನಿಗಿಲ್ಲ. ಇನ್ನು "ಜ್ಞಾನಕ್ರಿಯಾ ಸ್ವಭಾವಂ ತತ್ತೇಜಃ ಶಾಂಭವಂ ಜಯತಿ" ಎಂಬ ವಾಕ್ಯವು ಶಿವತೇಜಸ್ಸಿನ ಸ್ವರೂಪವನ್ನು ನಿರೂಪಿಸುತ್ತದೆ. ಎಂದರೆ ಅಭಿಪ್ರಾಯವಿಷ್ಟು–ಶಿವ ಸಾಮರ್ಥ್ಯವು (ಶಕ್ತಿ ಅಥವಾ ತೇಜಸ್ಸು) ಚಿತ್ತಿನ ಧರ್ಮ. ಆದ್ದರಿಂದ ಅದು ಚಿದಾತ್ಮಕ. ಇದೇ ಅರ್ಥವನ್ನು "ಶಕ್ತಿರ್ನಾಮಚೇತನಾ ಚಿತಃ" ಎಂಬ ಉಕ್ತಿ ಸಮರ್ಥಿಸುತ್ತದೆ.

ಹೀಗೆ ಮಹೇಶ್ವರನನ್ನು ಸ್ತುತಿಸಿ ಮಹಾದೇವ ವಲ್ಲಭೆಯೂ 'ಏಷ ತೇ ರುದ್ರಭಾಗಃ ಸಹ ಸ್ವಸ್ರಾಂಬಿಕಯಾ ತಂ ಜುಷಸ್ವ' ಮುಂತಾದ ಶ್ರುತಿ ಪ್ರತಿಪಾದ್ಯಳಾದ ಆ ಮಾಹೇಶ್ವರಿಯೇ ಅಧಿಕಾರಾವಸ್ಥೆಯಲ್ಲಿಯೂ ಸಹ ಶಿವನಿಗೆ ಕರಣವಾದುದರಿಂದ ಅಂಥ ಶಕ್ತಿಯನ್ನು ನಮಿಸುತ್ತಾನೆ.

ಶಕ್ತೋ ಯಯಾ ಸ ಶಂಭು
ಭು‍ರ್ಕ್ತೌ ಮುಕ್ತೌ ಚ ಪಶುಗಣಸ್ಯಾಸ್ಯ ।
ತಾಮೇಕಾಂ ಚಿದ್ರೂಪಾ
ಮಾದ್ಯಾಂ ಸರ್ವಾತ್ಮನಾಸ್ಮಿ ನತಃ ॥ ೩ ॥

(ಸ ಶಂಭುಃ) ಆ ಪರಮೇಶ್ವರನು (ಯಯಾ) ಯಾವ ಶಕ್ತಿಯಿಂದ (ಅಸ್ಯ ಪಶುಗಣಸ್ಯ) ಈ ಪಶು (ಜೀವ) ಸಮೂಹದ (ಭುಕ್ತೌ) ಭೋಗದಲ್ಲಿಯೂ (ಮುಕ್ತೌ ಚ) ಮೋಕ್ಷದಲ್ಲಿಯೂ ಕೂಡ (ಶಕ್ತಃ) ಸಮರ್ಥನಾಗಿರುವನೋ ಅಂಥ (ಏಕಾಂ) ಅದ್ವಿತೀಯವೂ (ಚಿದ್ರೂಪಾಂ) ಜ್ಞಾನಕ್ರಿಯಾ ರೂಪವೂ (ಆದ್ಯಾಂ) ಮುಖ್ಯವೂ ಆದ ( ತಾಂ ) ಆ ಶಿವ ಶಕ್ತಿಯನ್ನು (ಸರ್ವಾತ್ಮನಾ) ಎಲ್ಲ ವಿಧದಿಂದಲೂ (ನತಃ ಅಸ್ಮಿ) ನಮಸ್ಕರಿಸುತ್ತೇನೆ.

ವಿಚಾರ—ಜೀವಿಗಳಿಗೆ ಭೋಗ ಮತ್ತು ಮೋಕ್ಷಗಳನ್ನು ನೀಡುವುದಕ್ಕೂ ಜಗತ್ತಿನ ಸೃಷ್ಟಿ ಸ್ಥಿತಿ ಲಯ ತಿರೋಧಾನ ಮತ್ತು ಅನುಗ್ರಹನೆಂಬ ಪಂಚ ಕೃತ್ಯಗಳನ್ನು ಎಸಗುವುದಕ್ಕೂ ಸಹ ಪರಮೇಶ್ವರನಿಗೆ ಶಕ್ತಿಯ ಸಹಾಯವು

ಆವಶ್ಯಕ. ಶಕ್ತಿಯ ನೆರವಿಲ್ಲದೆ ಶಿವನು ಏನನ್ನೂ ಮಾಡಲಾರ. ಏಕೆಂದರೆ ಶಿವನು ಸರ್ವಗತ, ಕೇವಲ, ನಿಷ್ಕ್ರಿಯ, ಮೇಲಾಗಿ ಉದಾಸೀನತನು, ಅಂಥವನು ಪಶುಸಮುದಾಯಕ್ಕೆ ಭುಕ್ತಿ ಮುಕ್ತಿಗಳನ್ನು ಶಕ್ತಿಯ ಸಹಾಯ ವಿಲ್ಲದೆ ಕೊಡಲಾರ. "ಶಿವಃ ಶಕ್ತ್ಯಾ ಯುಕ್ತೋ ಯದಿ ಭವತಿ ಶಕ್ತಃ" ಪ್ರಭವಿತುಂ (ಸೌಂದರ್ಯಲಹರೀ) ಎಂಬ ಉಕ್ತಿ ಇದನ್ನು ಸಮರ್ಥಿಸುತ್ತದೆ.

ಸಂದೇಹ—ದೇಹ ಮತ್ತು ಇಂದ್ರಿಯಗಳಿಲ್ಲದ ಆತ್ಮನಿಗೆ ಕರ್ತೃತ್ವವು ಹೇಗೆ ಸಂಭವಿಸುತ್ತದೆ ?

ಸಮಾಧಾನ—ದೇಹ ಮತ್ತು ಇಂದ್ರಿಯಗಳಿಲ್ಲದಿದ್ದರೂ ಆತ್ಮನಿಗೆ ಶಕ್ತಿಯಿಂದಲೇ ಸ್ವದೇಹ ಸ್ಪಂದಾದಿಗಳಲ್ಲಿ ಸಾಮರ್ಥ್ಯವಿರುವುದು ಅನುಭವದಲ್ಲಿದೆ. ಇದನ್ನೇ 'ಕಾರಣಂ ತು ನ ಶಕ್ತ್ಯನ್ಯತ್'ಎಂಬ ಉಕ್ತಿಯೂ ಸಮರ್ಥಿಸುತ್ತದೆ. ಏಕಾಂ—ಅದ್ವಿತೀಯ ಎಂಬುದು ಶಕ್ತಿಯ ಪ್ರಭೇದಗಳನ್ನು ಸೂಚಿಸುತ್ತದೆ. ಮೂಲತಃ ಆ ಶಕ್ತಿಯು ಒಂದೇ ಆದರೂ ಅದು ಉಪಾಧಿಭೇದದಿಂದಆದಿಶಕ್ತಿ, ಪರಾಶಕ್ತಿ, ಚಿಚ್ಛಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿ ಎಂದೂ, ವಾಮಾ, ಜ್ಯೇಷ್ಠಾ, ರೌದ್ರೀ, ಕಾಳೀ, ಕಲವಿಕರಣೀ, ಬಲವಿಕರಣೀ, ಬಲ ಪ್ರಮಥಿನೀ, ಸರ್ವಭೂತದಮನೀ, ಮನೋನ್ಮನೀ ಮುಂತಾಗಿ ಅನೇಕ ವಿಧವಾಗಿದೆ. "ಏಕೈವಾನೇಕತಾಂ ಯಾತಿ ಶಿವ ಶಕ್ತಿರುಪಾಧಿತಃ" ಎಂಬ ಶ್ರುತಿ ಇದನ್ನು ಸಮರ್ಥಿಸುತ್ತದೆ.

ಸಂದೇಹ—ಹಿಂದೆ 'ಶಿವ ಏವ ಸರ್ವಂ' ಎಂದು ಶಿವಾದ್ವಿತೀಯತ್ವ ವನ್ನು ಪ್ರತಿಪಾದಿಸಲಾಯಿತು. ಈಗ ಶಕ್ತಿಯೂ 'ಅದ್ವಿತೀಯ' ಎನ್ನುತ್ತೀರಿ. ಇದು ಹೇಗೆ ?

ಸಮಾಧಾನ—ನಿಜ, ಆದರೆ ಪ್ರತಿಯೊಂದು ವಸ್ತುವೂ ದೇವೀ ಮತ್ತು ದೇವಾತ್ಮಕ. ಆದುದರಿಂದ ಅದ್ವಿತೀಯತ್ವವು ಶಿವ ಶಕ್ತಿಗಳೀರ್ವರಿಗೂ ಅನ್ವಯ ವಾಗುತ್ತದೆ. ಹೇಗೆಂದರೆ ಆತ್ಮನ ಕೇವಲಾವಸ್ಥೆಯನ್ನು ಪಡೆದಿರುವ ಅಪವರ್ಗ (ಮೋಕ್ಷ) ವೂ ಕೂಡ ಚಿದಾನಂದರೂಪ. ಆದ್ದರಿಂದ ಅಲ್ಲಿಯೂ ದೇವೀ ದೇವಾತ್ಮಕತ್ವವುಂಟು. ಮೋಕ್ಷವು ಆನಂದರೂಪವಲ್ಲದಿದ್ದರೆ ಅದು ಪುರುಷಾರ್ಥವೆನಿಸದು. ಸುಖವೇ ಮುಖ್ಯ ಪುರುಷಾರ್ಥವಾದ್ದರಿಂದ ಅಪವರ್ಗವು

ಆನಂದ ರೂಪವೆನಿಸಿತು. ಸುಖ ಅನುಭವ ವೇದ್ಯ. ಆದ್ದರಿಂದ ಮೋಕ್ಷವು ಅಂಥ ಅನುಭವವನ್ನು ಆಶ್ರಯಿಸಬೇಕು. ಎಂದಮೇಲೆ ಚಿದಾತ್ಮಕ ಸುಖವೇ ಮೋಕ್ಷವೆಂದಾಯಿತು. "ಸುಖ–ಚಿದಾತ್ಮಕ" ಎಂದರೂ "ದೇವೀ-ದೇವಾತ್ಮಕ" ಎಂದರೂ ಒಂದೇ. ಅಂದರೆ "ಪರಮಾನಂದಸಂವಿತ್ತೇ ಶಕ್ತಿ" "ಸಂವಿದಾನಂದವೇ ಶಿವ." ಇದನ್ನೇ "ಏಷಾ ವಿದ್ಯಾ ಹ್ಯಹಂ ದೇವಃ "ಎಂಬ ಪುರಾಣೋಕ್ತಿಯೂ, "ಆದಿನಾಥ ಋಷಿಶ್ಛಂದೋ ದೇವೀಗಾಯತ್ರಿ ಉಚ್ಯತೇ। ದೇವತಾ ಪರಮಾನಂದ ಸಂವಿದತ್ರೋಪದಿಶ್ಯತೇ॥" ಎಂದು ದೇವೀಮಂತ್ರಕಲ್ಪವೂ ಸಮರ್ಥಿಸಿವೆ. ಭುವನೇಶ್ವರೀ ಕಲ್ಪದಲ್ಲಿ "ಬೋಧಸ್ವರೂಪವಾಚೀ ಸಂವಿತ್ ಪ್ರೋಕ್ತಾ ಚ ದೇವತಾ ಗುರುಭಿಃ" ಎಂದೂ "ವಿಜ್ಞಾನಮಾನಂದಂ ಬ್ರಹ್ಮ" ಎಂಬ ಶ್ರುತಿಯೂ ನಿರ್ದೇಶಿಸಿವೆ. ಲಿಂಗಪುರಾಣದಲ್ಲಿ

ಅಸ್ಯಾಷ್ಟಮೂರ್ತೇಶ್ಕರ್ವಸ್ಯ ಶಿವಸ್ಯ ಗೃಹಮೇಧಿನಃ ।
ಗೃಹಿಣೀ ಪ್ರಕೃತಿರ್ದಿವ್ಯಾ ಪ್ರಜಾಶ್ಚ ಮಹದಾದಯಃ ॥

ಎಂದು ಹೇಳಿರುವುದಲ್ಲದೆ ಬೃಹದಾರಣ್ಯಕದಲ್ಲಿ–

ಏಕಾಕೀ ನ ರಮತೇ ಸ ದ್ವಿತೀಯ ಮೈಚ್ಛತ್ । ಸ ಹೈತಾವಾನಾಸ । ಪುಂಸ್ತ್ವಂ ಸ್ತ್ರೀತ್ವಂ ಚಾಪಾತಯತ್। ಪತನಾತ್ ಪತಿಃ ಪತ್ನೀಚ। ಸಾ ಗೌರಭವತ್। ಋಷಭ ಇತರಃ। ತಾಭ್ಯಾಂ ಗಾವಃ । ಸಾ ಬಡವಾ ಭವದಶ್ವ ಇತರಃ । ತಾಭ್ಯಾಮಶ್ವಾಃ"

ಎಂದರೆ ಸೃಷ್ಟಿಯ ಆದಿಯಲ್ಲಿ ಜಗತ್ತನ್ನು ಸೃಜಿಸಬೇಕು ಎಂಬ ಸಂಕಲ್ಪವುಳ್ಳ ಬ್ರಹ್ಮವು ತಾನೊಬ್ಬನೇ ಇರಲಾಗಲಿಲ್ಲ. ಆದಕ್ಕೆ ಎರಡನೆಯದರ ಬಯಕೆಯಾಯಿತು ; ಆಗ ಆ ಬ್ರಹ್ಮದಿಂದ ಪುಂಸ್ತ್ವ ಮತ್ತು ಸ್ತ್ರೀತ್ವಗಳ ಪತನವಾಯಿತು. ಅದೇ ಪತಿ ಮತ್ತು ಪತ್ನಿ ಎನಿಸಿತು. ಅದು ಗೋವು ಮತ್ತು ವೃಷಭವಾಯಿತು. ಅವೆರಡರ ಸಂಪರ್ಕದಿಂದ ಪಶುಗಳು ಜನಿಸಿದವು. ಅದು ವಡಬಾ (ಹೆಣ್ಣು ಕುದುರೆ) ಮತ್ತು ಅಶ್ವವಾಯಿತು. ಅವೆರಡರಿಂದ ಅಶ್ವ ಜಾತಿಯುದಿಸಿತು. ಎಂಬ ವರ್ಣನವು ಎಲ್ಲ ಜಂತುವರ್ಗವೂ ದೇವೀ–ದೇವಾತ್ಮಕ ಎಂಬುದನ್ನು ನಿರೂಪಿಸುತ್ತದೆ.

ದ್ವಿಧಾ ಕೃತ್ವಾತ್ಮನೋ ದೇಹಮರ್ಧೇನ ಪುರುಷೋಽಭವತ್ ।
ಅರ್ಧೇನ ನಾರೀ ತಸ್ಯಾಂ ಚ ಸ್ತ್ರೀಲಿಂಗಂ ಪರಮೇಶ್ವರಃ ॥ (—ಮನು)
ಪುಲ್ಲಿಂಗಮಖಿಲಂ ದೇವಃ ಸ್ತ್ರೀಲಿಂಗಂ ಪರಮೇಶ್ವರೀ । (ಲಿಂಗ ಪುರಾಣ)

ಮುಂತಾದ ಉಕ್ತಿಗಳಿಂದ ಶಿವ–ಶಕ್ತಿಗಳೆರಡೂ ಅದ್ವಿತೀಯವೆಂಬುದು ಸಿದ್ಧವಾಗುತ್ತದೆ.

ಚಿದ್ರೂಪಾಂ—ಎಂಬುದು ಆ ಶಕ್ತಿಯಲ್ಲಿ ಕಾರ್ಯಭೇದವಿದ್ದರೂ ಅದು ಜಡಮಾಯಾದಿಗಳಂತೆ ಪರಿಣಾಮಿಯಲ್ಲ—ಎಂಬುದು ಸೂಚಿತವಾಗುತ್ತದೆ. ಪರಿಣಾಮವು ಜಡಮಾಯೆಯ ಧರ್ಮ. ಆದ್ಯಾಂ—ಎಂದರೆ ಪ್ರಧಾನ ಮತ್ತು ಸಮವೇತ ಎಂದು ಅರ್ಥ. ಪರಿಗ್ರಹ ಶಕ್ತಿಸ್ವರೂಪವು ಬಿಂದು ಮತ್ತು ಮಾಯೆ ಎಂಬ ಪರಶಿವನ ಎರಡು ಬಾಹ್ಯಶಕ್ತಿಗಳುಳ್ಳದ್ದು. ಮೇಲಾಗಿ ಉಪಾದಾನವಿಲ್ಲದೆ ಜಗತ್ತಿನ ಉತ್ಪತ್ತಿಯೇ ಆಗುವಂತಿಲ್ಲ. "ಕರ್ತ್ರಾ ವಿನಾ ನ ಕಾರ್ಯಂ ನ ತಥೋಪಾದಾನ ಕರಣಾಭ್ಯಾಮ್" ಎಂಬ ಉಕ್ತಿಯು ಈ ಅಂಶವನ್ನು ಸೂಚಿಸುತ್ತದೆ. ಎಂದರೆ ಒಂದು ಕಾರ್ಯ ಸಿದ್ಧಿಸಬೇಕಾದರೆ ಕರ್ತೃ (ನಿಮಿತ್ತ) ಉಪಾದಾನ, ಮತ್ತು ಸಹಕಾರಿಕಾರಣಗಳಿರಬೇಕು ಉದಾಹರಣೆಗೆ 'ಘಟ' ಎಂಬ ಕಾರ್ಯವು ಸಿದ್ಧಿಸಬೇಕಾದರೆ ಕುಂಬಾರ (ನಿಮಿತ್ತಕಾರಣ), ಮಣ್ಣು (ಉಪಾದಾನಕಾರಣ) ಮತ್ತು ದಂಡ–ಚಕ್ರ ಮುಂತಾದ ಸಹಕಾರಿಕಾರಣಗಳಿರಬೇಕು. ಅದರಂತೆ ಜಗತ್ತು ಸೃಷ್ಟಿಯಾಗಲು ಶಿವ (ನಿಮಿತ್ತ) ಶಕ್ತಿ (ಉಪಾದಾನ) ಮತ್ತು ಜೀವಿಗಳ ಪುಣ್ಯ ಮತ್ತು ಪಾಪ ಕರ್ಮಗಳು (ಸಹಕಾರಿ) ಅವಶ್ಯಕ.

ಪ್ರಕೃತ ಈ ಪ್ರಕರಣದಲ್ಲಿ ಹೇಳುವ ವಿಷಯವನ್ನು ಕುರಿತು ಪ್ರತಿಜ್ಞೆ ಮಾಡುತ್ತಾನೆ.

ಲೋಕಾನುಗ್ರಹ ಹೇತೋಃ
ಕರುಣಾರಸ ನಿರ್ಭರೇಣ ಚಿತ್ತೇನ ।
ತತ್ತ್ವಪ್ರಕಾಶ ಏಷೋಽ-
ಸ್ಮಾಭಿಃ ಕ್ರಿಯತೇ ಸಮಾಸೇನ ॥ ೪ ॥

(ಲೋಕಾನುಗ್ರಹಹೇತೋಃ) ಜನರನ್ನು ರಕ್ಷಿಸುವುದಕ್ಕಾಗಿ (ಕರುಣಾರಸನಿರ್ಭರೇಣ) ಕೃಪಾರಸಭರಿತವಾದ (ಚಿತ್ತೇನ) ಮನಸ್ಸಿನಿಂದ (ಏಷಃ ತತ್ತ್ವಪ್ರಕಾಶಃ) ಈ ತತ್ತ್ವಗಳ ಜ್ಞಾನವು (ಅಸ್ಮಾಭಿಃ) ನಮ್ಮಿಂದ (ಸಮಾಸೇನ) ಸಂಕ್ಷೇಪವಾಗಿ (ಕ್ರಿಯತೇ) ನಿರೂಪಿಸಲ್ಪಡುತ್ತದೆ. ಇಲ್ಲಿ ತತ್ತ್ವಶಬ್ದವು ಉಪಲಕ್ಷಣ. ಅದರಿಂದ ಪೃಥ್ವಿತತ್ತ್ವ ಮೊದಲು ಶಿವತತ್ತ್ವ ಕಡೆಯಾದ ಮೂವ

ತ್ತಾರು ತತ್ತ್ವಗಳ ಮತ್ತು ಆ ತತ್ತ್ವಗಳಿಗೆ ಕರ್ತೃವಾದ ಪರಶಿವನ ಹಾಗೂ ಆ ತತ್ತ್ವಗಳಿಂದ ಉಪಕರಿಸಿಕೊಳ್ಳುವ ಜೀವಾತ್ಮರ ಪ್ರಕಾಶವು ಸ್ಪಷ್ಟವಾಗುತ್ತದೆ ಎಂದು ತಾತ್ಪರ್ಯ.

ಅನುಬಂಧಚತುಷ್ಟಯ—ಈ ಕಾರಿಕೆಯಲ್ಲಿ ವಿಷಯ, ಸಂಬಂಧ ಮತ್ತು ಪ್ರಯೋಜನಗಳು ನಿರ್ದಿಷ್ಟವಾಗಿವೆ. ಇಲ್ಲಿ 'ಲೋಕಾನುಗ್ರಹಹೇತೋಃ' ಎಂಬುದರಿಂದ ಪ್ರಯೋಜನವು ಉಕ್ತವಾಗಿದೆ.(ಲೋಕಾನಾಂ)| ಪಶುವೆನಿಸಿರುವ ಜೀವಾತ್ಮರಿಗೆ ಅನುಗ್ರಹ ಎಂದರೆ ಮೋಕ್ಷವನ್ನು ನೀಡುವುದೇ ಪ್ರಯೋಜನ. "ಲೋಕಾನುಗ್ರಹ ಹೇತೋಃ ಏಷಃ ತತ್ತ್ವಪ್ರಕಾಶಃ" ಎಂಬುದರಿಂದ ಶಾಸ್ತ್ರ ಮತ್ತು ಪ್ರಯೋಜನಗಳಿಗೆ ಸಾಧ್ಯಸಾಧನ 'ಸಂಬಂಧ'ವನ್ನು ಹೇಳಲಾಯಿತು, "ತತ್ತ್ವಪ್ರಕಾಶಃ" ಎಂದರೆ ತತ್ತ್ವಗಳು ಪ್ರದರ್ಶಿಸಲ್ಪಡುತ್ತವೆ ಎಂದುದರಿಂದ ಶಾಸ್ತ್ರದ ವಿಷಯವು ಸ್ಪಷ್ಟವಾಯಿತು.

ಸಂದೇಹ—ಶಾಸ್ತ್ರವು ಪ್ರತಿಪಾದಿಸಿರುವ ತತ್ತ್ವಗಳಿಂದ ಜ್ಞಾನ ಉದಿಸುತ್ತದೆ ನಿಜ; ಆದರೆ ಅದು ಅಪವರ್ಗಕ್ಕೆ ಹೇಗೆ ಸಾಧನವಾಗುತ್ತದೆ?

ಸಮಾಧಾನ—ಅಂದರೆ ಶಾಸ್ತ್ರ ಶ್ರವಣದಿಂದ ಜೀವರಿಗೆ ತತ್ತ್ವ (ನಿಜದ) ಜ್ಞಾನವುಂಟಾಗುತ್ತದೆ. ಆ ಜ್ಞಾನದಿಂದ ಮಿಥ್ಯಾಜ್ಞಾನವು ನಷ್ಟವಾಗುತ್ತದೆ. ಆಗ ಅಜ್ಞಾನದಿಂದ ಉಂಟಾಗಿದ್ದ ರಾಗ ದ್ವೇಷಾದಿಗಳು ಅಳಿಯುತ್ತವೆ. ಆದರಿಂದ ವಿಷಯಾದಿಗಳಲ್ಲಿ ಆಸಕ್ತಿ ಹುಟ್ಟುವುದಿಲ್ಲ. ದೀಕ್ಷೆಯಿಂದ ಸಂಕುಚಿತಕರ್ಮವು ನಷ್ಟವಾಗುತ್ತದೆ. ಪ್ರಾರಂಭಿಸಿದ ಕಾರ್ಯಗಳು ಉಪಭೋಗದಿಂದ ನಷ್ಟವಾಗುತ್ತವೆ. ಅನಂತರ ಶರೀರಾದಿ ಉಪಾಧಿಗಳು ಇಲ್ಲದುದರಿಂದ ಜೀವಾತ್ಮನ ಶಿವಸ್ವಭಾವವು (ಘಟಾಕಾಶವು ಅದಕ್ಕೆ ಉಪಾಧಿಯಾದ ಘಟವು ನಷ್ಟವಾದರೆ ಅದು ಮಹಾಕಾಶದಲ್ಲಿ ಹೇಗೆ ವಿಲೀನವಾಗುವುದೋ ಅದರಂತೆ) ಪರಶಿವನಲ್ಲಿ ಲಯವನ್ನು ಹೊಂದುತ್ತದೆ. ಇದೇ ಅಪವರ್ಗ.

ಘಟಾಕಾಶಮಿವಾಕಾಶೇ ಸರಿತ್ತೋಯಮಿವಾರ್ಣವೇ ।
ಜೀವೋ ಮೇ ವಿಲಯಂ ಯಾತು ಶಿವಾಖ್ಯೇ ಪರಮಾತ್ಮನಿ ॥

(ಶ್ರೀಕೂರ್ಮೇ)

ಜಗತಸ್ತತ್ತ್ವಸಂಬೋಧಾದಜ್ಞಾನಂ ವಿನಿವರ್ತತೇ ।
ಅಜ್ಞಾನ ವಿನಿವೃತ್ತೌ ಚ ರಾಗಾದೀನಾಮಸಂಭವಃ ॥

ರಾಗಾದ್ಯುಪಶಮಾತ್ಪುಂಸಾಂ ಪುಣ್ಯಪಾಪಪರಿಕ್ಷಯಃ ।
ತತ್ ಕ್ಷಯಾಚ್ಚ ಶರೀರೇಣ ನ ಪುನಃ ಸಂಪ್ರಯುಜ್ಯತೇ ॥
ಅಶರೀರಂ ಚ ಸಂಕ್ಲೇಶೈಃ ಸರ್ವೈರೇವ ನ ಬಾಧ್ಯತೇ ।
ಕ್ಲೇಶಮುಕ್ತಃ ಪ್ರಸನ್ನಾತ್ಮಾ ಮುಕ್ತ ಇತ್ಯಭಿಧೀಯತೇ ॥

(ಶಿವಧರ್ಮೋತ್ತರೇ)

ಆದುದರಿಂದ ಶ್ರುತಿಯು 'ಆತ್ಮಾವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ'ಎಂದು ಬೋಧಿಸಿದೆ."ಶ್ರೋತವ್ಯಃ ಶ್ರುತಿವಾಕ್ಯೇಭ್ಯೋ ಮಂತವ್ಯ ಶ್ಚೋಪಪತ್ತಿಭಿಃ। ಜ್ಞಾತ್ವಾ ಚ ಸತತಂ ಧ್ಯೇಯಃ" ಎಂಬ ಉಕ್ತಿಯು ಮೋಕ್ಷಕ್ಕೆ ಕೇವಲ ಶಾಸ್ತ್ರಶ್ರವಣ ಮಾತ್ರ ಸಾಲದು. ಗುರುಮುಖದಿಂದ ಅಧ್ಯಾತ್ಮ ವಿಷಯವನ್ನು ಶ್ರದ್ಧೆಯಿಂದ ಕೇಳಬೇಕು. ಕೇಳಿದ ಮೇಲೆ, ಉಪಪತ್ತಿ(ಪ್ರಮಾಣ)ಗಳಿಂದ ಅದನ್ನು ದೃಢಪಡಿಸಿಕೊಂಡು ಮನನ ಮಾಡಬೇಕು. ನಿಜತತ್ತ್ವವನ್ನು ತಿಳಿದಮೇಲೆ ನಿರಂತರ ಧ್ಯಾನ(ಅನುಸಂಧಾನ)ಮಾಡಬೇಕು. "ಏತೇ ದರ್ಶನ ಹೇತವಃ" ಎಂಬ ಉಕ್ತಿ ಇದನ್ನು ಸಮರ್ಥಿಸುತ್ತದೆ. '

ಪ್ರಕಾಶಿಸಲು ಯೋಗ್ಯವಾದ ಆ ಪದಾರ್ಥಗಳನ್ನು ಉದ್ದೇಶ ಮುಖದಿಂದ ನಿರೂಪಿಸುತ್ತಾನೆ.

ಶೈವಾಗಮೇಷು ಮುಖ್ಯಂ
ಪತಿ ಪಶು ಪಾಶಾ ಇತಿ ಕ್ರಮಾತ್ ತ್ರಿತಯಮ್ ।
ತತ್ರ ಪತಿಃ ಶಿವ ಉಕ್ತಃ
ಪಶವೋಽಹ್ಯಣವೋರ್ಥಪಂಚಕಂ ಪಾಶಾಃ[1] ॥೫॥

(ಶೈವಾಗಮೇಷು) ಶಿವಾಗಮಗಳಲ್ಲಿ (ಪತಿ ಪಶು ಪಾಶಾ ಇತಿ) ಪತಿ, ಪಶು, ಪಾಶ ಎಂದು (ಕ್ರಮಾತ್)ಕ್ರಮವಾಗಿ (ತ್ರಿತಯಂ) ಮೂರು ಪದಾರ್ಥಗಳು (ಮುಖ್ಯಂ) ಮುಖ್ಯವಾಗಿವೆ. (ತತ್ರ) ಆ ಮೂರು ಪದಾರ್ಥಗಳಲ್ಲಿ (ಪತಿಃ) ಪತಿಪದಾರ್ಥವು (ಶಿವಃ) ಶಿವನೆಂದು (ಉಕ್ತಃ) ಹೇಳಲ್ಪಟ್ಟಿದ್ದಾನೆ. (ಪಶವಃ) ಪಶುಗಳು (ಅಣವಃ) ಜೀವಾತ್ಮರು ಎಂಬುದು (ಹಿ) ಸುಪ್ರಸಿದ್ಧ.

---

[1]ಪಾಶಃ (ಗ)

(ಅರ್ಥಪಂಚಕಂ) ಮಲ ಮೊದಲಾದ ಐದು ಪದಾರ್ಥಗಳು (ಪಾಶಃ) ಪಾಶವೆನಿಸುವವು.

ವಿಚಾರ—ಶೈವಾಗಮ ಶಾಸ್ತ್ರದಲ್ಲಿ ಪದಾರ್ಥಗಳು ಪತಿ–ಪಶು–ಪಾಶ ಎಂದು ಮೂರು ವಿಧ. "ತ್ರಿಪದಾರ್ಥಂ ಚತುಷ್ಪಾದಂ ಮಹಾತಂತ್ರಂ ಜಗದ್ಗುರುಃ। ಸೂತ್ರೇಣೈಕೇನ ಸಂಕ್ಷಿಪ್ಯ ಪ್ರಾಹ ವಿಸ್ತರತಃ ಪುರಾ" ಎಂಬ ಉಕ್ತಿ ಇದನ್ನು ಸಮರ್ಥಿಸುತ್ತದೆ. ಇವುಗಳಲ್ಲಿಯೇ ಮುವತ್ತಾರು ತತ್ತ್ವಗಳೂ ಅಂತರ್ಭಾವವಾಗುತ್ತವೆ. ಹೇಗೆಂದರೆ ಶಿವ ಶಕ್ತಿ ಮುಂತಾದ ಶುದ್ಧ ತತ್ತ್ವಗಳು ಪತಿ ಪದಾರ್ಥದಲ್ಲಿ ಅಡಗುತ್ತವೆ. ಮಾಯೆಯ ಕಾರ್ಯಗಳಾದ ಶುದ್ಧಾಶುದ್ಧ ತತ್ತ್ವಗಳು ಪಾಶಪದಾರ್ಥದಲ್ಲಿಯೂ, ಉಳಿದವು ಪಶುಪದಾರ್ಥದಲ್ಲಿಯೂ, ಅಂತರ್ಭಾವವಾಗುತ್ತವೆ.

ಪತ್ಯೌ ಶಿವಸ್ವಭಾವಾಃ ಸರ್ವೇ ಸರ್ವಾತ್ಮನಾ ಪ್ರಕಾಶ್ಯಂತೇ ।
ಕೇಚನ ಪಾಶೇಷು ಪಶುಷು ಚಾಂತರ್ದಧತೇ ನಿರವಶೇಷಮ್ ॥

ಪ್ರಕೃತ ಪತಿ ಎಂದರೆ ಶಿವ. ಶಿವಶಬ್ದವು ಜಾತ್ಯೈಕವಚನ. ಆದ್ದರಿಂದ ಶಿವತತ್ತ್ವಯೋಗವುಳ್ಳ ಮಂತ್ರ, ಮಂತ್ರೇಶ್ವರ, ಮಂತ್ರಮಹೇಶ್ವರ, ಮುಕ್ತಾತ್ಮ, ಶಕ್ತಿ, ಶಿವ ಮೊದಲಾದವು ಶಿವತ್ವಪ್ರಾಪ್ತಿಗೆ ಸಾಧನವಾದ ದೀಕ್ಷಾದಿ ಉಪಾಯಗಳಿಂದ ಪತಿಪದಾರ್ಥದಲ್ಲಿಯೇ ಅಂತರ್ಭಾವ ಹೊಂದುತ್ತವೆ.

ಸಂದೇಹ—ಪದಾರ್ಥಗಳು ಮೂರು ಎಂದು ಹೇಗೆ ನಿರ್ಧರವಾಯಿತು ?

ಸಮಾಧಾನ—ಅವು ಶಿವೋಕ್ತವಾದ ೨೮ ಶಿವಾಗಮಗಳಲ್ಲಿ ಪ್ರತಿಪಾದಿತವಾಗಿರುವುದರಿಂದ. ಪರಶಿವ ಪ್ರೋಕ್ತವಾದ್ದರಿಂದ ಅವು ಪ್ರಮಾಣ. ಏಕೆಂದರೆ ಶಿವನು ಸರ್ವಜ್ಞ. ಅವನಿಗೆ ಅಜ್ಞಾನ, ಅನ್ಯಥಾಜ್ಞಾನ, ರಾಗದ್ವೇಷಾದಿಗಳಿರುವುದಿಲ್ಲ. ಮೇಲಾಗಿ ಅವನು ನಮಗೆ ಪರಮಾಪ್ತ. ಆದ್ದರಿಂದ ಅವನು ಹೇಳಿದ ಆಗಮಗಳು ಪರಮಪ್ರಮಾಣ.

ಆಗಮಪ್ರಾಮಾಣ್ಯ—

ವಿಧಿವಾಕ್ಯಮಿದಂ ಶೈವಂ ನಾರ್ಥವಾದಃ ಶಿವಾತ್ಮಕಮ್ ।
ಲೋಕಾನುಗ್ರಹ ಕರ್ತಾ ಯಃ ಸಃ ಮೃಷಾರ್ಥಂ ಕಥಂ ವದೇತ್ ॥

ತಸ್ಮಾದೀಶ್ವರವಾಕ್ಯಾನಿ ಶ್ರದ್ಧೇಯಾನಿ ವಿಪಶ್ಚಿತಾ ।
ಯಥಾರ್ಥಂ ಪುಣ್ಯಪಾಪೇಷು ತದ ಶ್ರದ್ಧೋ ವ್ರಜತ್ಯಧಃ ॥

ವೇದಮೂಲವಾದ್ದರಿಂದಲೂ, ಶಿವಪ್ರಣೀತವಾದುದರಿಂದಲೂ ಆಗಮಗಳು ಪ್ರಮಾಣ. (ಅಣವ) : ಜೀವಾತ್ಮರು ಎಂದರೆ ಶಿವನಿಂದ ಪ್ರೇರ್ಯರು. ವಿಜ್ಞಾನಕಲರೇ ಮುಂತಾದ ಬದ್ಧಾತ್ಮರು ಪಶುಪದಾರ್ಥದಲ್ಲಿ ಅಂತರ್ಭಾವ ಹೊಂದುತ್ತಾರೆ. ಅಣುತ್ವವನ್ನು ಉಂಟುಮಾಡುವುದು ಮಲ. ಆದರಿಂದ ಆವೃತರಾದವರು ಪಶುಗಳು. ಅವರು ವಾಸ್ತವವಾಗಿ ಶಿವಸ್ವಭಾವದ ಜೀವಾತ್ಮರೇ ಹೊರತು ಚತುಷ್ಪಾದ ಪಶುಗಳಲ್ಲ. "ಏತಾವಂಶೋ ವೈ ಪಶವೋ ದ್ವಿಪಾದಶ್ಚತುಷ್ಪದಶ್ಚ" ಎಂದು ಶ್ರುತಿ ಸಾರಿದೆ. "ಏಷಾಮೀಶೇ ಪಶುಪತಿಃ ಪಶೂನಾಂ ಚತುಷ್ಪದಾಮ್" ಎಂಬ ಶ್ರುತಿಯಂತೆ ಎರಡು ಪಾದವುಳ್ಳವರಿಗೂ ಪಶುತ್ವ ವ್ಯವಹಾರವುಂಟು. ಪಾಶಬದ್ಧರಾದ್ದರಿಂದಲೇ ಜೀವರು ಪಶುಗಳೆನಿಸಿದರು. ಆಗ ಶಿವನಿಗೆ ಪಶುಪತಿ ಎಂಬುದೂ ಸಿದ್ಧಿಸಿತು.

ಸಂದೇಹ :—ಶಿವಸ್ವಭಾವದ ಜೀವಾತ್ಮರು ಯಾವ ಕಾರಣದಿಂದ ಮಲಾವೃತರಾಗಿ ಪಶುಗಳೆನಿಸಿದರು ?

ಸಮಾಧಾನ :—ಮಲಪಾಶ ಸಂಬಂಧದಿಂದ ಕರ್ಮಪಾಶ; ಕರ್ಮಪಾಶ ಸಂಬಂಧದಿಂದ ಮಾಯಾಪಾಶ; ಈ ಮಲಪಾಶವು ಅನಾದಿ. ಆದ್ದರಿಂದ ಅದಕ್ಕೆ ಕಾರಣವಿರುವುದಿಲ್ಲ.

ಅನಾದಿ ಮಲಸಂಬಂಧಾನ್ಮಲಿನತ್ವಮಣೌ ಸ್ಥಿತಮ್ ।
ಅನಾದಿ ಮಲಮುಕ್ತತ್ವಾನ್ನಿರ್ಮಲತ್ವಂ ಸ್ಥಿತಂ ಶಿವೇ ॥
ಆದಿಮತ್ವಂ ಯದಾ ಸಿದ್ಧಂ ನಿಮಿತ್ತಂ ಕಥ್ಯತೇ ತದಾ ।
ಈದೃಗ್ರೂಪಂ ಸ್ಮೃತಂ ತಾಭ್ಯಾಂ ಶುದ್ಧಾಶುದ್ಧಂ ಯಥಾರ್ಥತಃ ॥
ವಿಶುದ್ಧಃ ಸ್ಫಟಿಕಸ್ಸ್ಯಾತ್ತಸ್ಯಾತ್ತಾಮ್ರಂ ಸಕಾಲಿಕಮ್ ।
ಯಥಾಸ್ಮಿನ್ನ ನಿಮಿತ್ತಂ ಸ್ಯಾತ್ ತಥಾ ನ ಸ್ಯಾಚ್ಛಿವಾತ್ಮನೋಃ ॥

—ಕಿರಣೇ

ಅರ್ಥಪಂಚಕ ಎಂದರೆ ಮಲ, ರೋಧಶಕ್ತಿ, ಕರ್ಮ, ಮಾಯಾ ಮತ್ತು ಬಂಧಗಳು,

ಮಲಂ ಕರ್ಮ ಚ ಮಾಯಾ ಚಮಾಯೋತ್ಥಮಖಿಲಂ ಜಗತ್ ।
ತಿರೋಧಾನಕರೀ ಶಕ್ತಿರರ್ಥಪಂಚಕಮುಚ್ಯತೇ ॥

ಸಂದೇಹ :—ಅರ್ಥಪಂಚಕಕ್ಕೆ ಪಾಶವೆಂದು ಹೇಳಿದಿರಿ. ಬೇರೆ ಶಾಸ್ತ್ರಗಳಲ್ಲಿ ಆಣವ, ಮಯಿಾಯ ಮತ್ತು ಕಾರ್ಮ ಎಂದು ಪಾಶವು ಮೂರು ವಿಧವೆಂದು ಹೇಳಿದೆ. ಅಂದಮೇಲೆ ಪರಸ್ಪರ ವಿರೋಧವಾಗಲಿಲ್ಲವೆ ?

ಸಮಾಧಾನ :—ವಿರೋಧವಿಲ್ಲ. ಏಕೆಂದರೆ ಪಾಶವನ್ನು ಅನುಗ್ರಹಿಸುವುದೇ ಈಶ್ವರಶಕ್ತಿಯ ಸ್ವಭಾವ. ಮಾಯಾಪಾಶವು ಸ್ಥೂಲ, ಸೂಕ್ಷ್ಮ ಎಂದು ಎರಡು ವಿಧ. ಅರ್ಥಪಂಚಕವೂ ಈ ಪ್ರಭೇದಗಳಲ್ಲಿಯೇ ಅಡಗಿದೆ.

ಮತ್ತೆ ಕೆಲವರು ಅರ್ಥಪಂಚಕವನ್ನು ಪಾಶವೆಂದು ಹೇಳುತ್ತಾರೆ. ಆಗ ಷಡಧ್ವಗಳೆನಿಸಿರುವ ತತ್ತ್ವ, ವರ್ಣ, ಮಂತ್ರ, ಭುವನ, ಪದ ಮತ್ತು ಕಲೆಗಳು ಈ ಪಂಚಕದಲ್ಲಿಯೇ ಸೇರುತ್ತವೆ.

> ಶಿವಃ ಪಶುಪತಿಃ ಪ್ರೋಕ್ತಃ ಪಶವೋಹ್ಯಣವೋ ಮತಾಃ ।
> ತೇ ಪಾಶಬಂಧಾತ್ ಪಶವಃ ಪಾಶಸ್ಯಾದಧ್ವಪಂಚಕಮ್ ॥
> ಅಧ್ವಾನಸ್ತತ್ತ್ವಭುವನ ಕಲಾರ್ಣಪದ ಮಂತ್ರಕಾಃ ।
> ಯೈರಮೀ ಪುರುಷಾ ಬದ್ಧಾಃ ಸಂಸರಂತಿ ಭವಾದ್ಭವಮ್ ॥
> ಮಲಾದಿಜಾಃ ಷಡಧ್ವಾನಃ ತತ್ತ್ವಾದ್ಯಾಸ್ತೇ ಚ ಪಂಚಧಾ ।
> ನಿವೃತ್ತ್ಯಾದಿ ವಿಭಾಗೇನ ತದುಕ್ತಂ ಹ್ಯಧ್ವಪಂಚಕಮ್ ॥

(—ಶಿವಸಿದ್ಧಾಂತ ಹೃದಯ)

ಈ ಐದರಲ್ಲಿ ಬಿಂದು ಮತ್ತು ಮಾಯೆಗಳಿಂದ ಹುಟ್ಟಿದ ಶುದ್ಧಾಶುದ್ಧರೂಪವಾದ ತತ್ತ್ವ, ಭುವನ, ಭೂತಭಾವಗಳೂ ಅಂತರ್ಭಾವವಾಗುತ್ತವೆ.

ಸಂದೇಹ:—ಒಂದೇ ಶಕ್ತಿ ಪತಿಪದಾರ್ಥದೊಡನೆಯೂ, ಪಶುಪದಾರ್ಥದೊಡನೆಯೂ ಸೇರುವುದು ಹೇಗೆ ?

ಸಮಾಧಾನ :—ಹೌದು ; ವಾಸ್ತವವಾಗಿ ಶಕ್ತಿಯು ಪತಿಪದಾರ್ಥದ ಜೊತೆಗೇ ಸೇರುವುದು. ಆದರೂ ಪಾಶಧರ್ಮವನ್ನು ಅನುಸರಿಸುವುದರಿಂದ ಅದು ಔಪಚಾರಿಕ (ಗೌಣ) ವಾಗಿ ಪಾಶದೊಂದಿಗೂ ಸೇರುತ್ತದೆ. "ತಾಸಾಂ ಮಾಹೇಶ್ವರೀ ಶಕ್ತಿಃ ಸರ್ವಾನುಗ್ರಾಹಿಕಾ ಶಿವಾ । ಧರ್ಮಾನುವರ್ತನಾದೇವ ಪಾಶ ಇತ್ಯುಪಚರ್ಯತೇ" ಎಂಬ ಉಕ್ತಿ ಇದನ್ನು ಸಮರ್ಥಿಸುತ್ತದೆ.

ಮುಕ್ತಾತ್ಮರಿಗೆ ಪಾಶಸಂಬಂಧವಿಲ್ಲದಿರುವುದರಿಂದ ಶಿವತ್ವವುಂಟು. ಆದರೆ ವಿದ್ಯೇ

ಶ್ವರ ಮೊದಲಾದವರಿಗೆ ಬೈಂದವ ಶರೀರವಿದ್ದರೂ ಸಹ ಅವರಿಗೆ ಪಾಶತ್ವವೇಕಿಲ್ಲ ಎಂದರೆ—

ಮುಕ್ತಾತ್ಮನೋಽಪಿ ಶಿವಾಃ
ಕಿಂತ್ವೇತೇ ತತ್ಪ್ರಸಾದತೋ ಮುಕ್ತಾಃ ।
ಸೋಽನಾದಿ ಮುಕ್ತ ಏಕೋ
ವಿಜ್ಞೇಯಃ ಪಂಚಮಂತ್ರತನುಃ ॥೬॥

(ಮುಕ್ತಾತ್ಮನೋಽಪಿ) ಪರಾಪರಮುಕ್ತರೂ ಕೂಡ (ಶಿವಾಃ) ಶಿವ ಸ್ವರೂಪರು. (ಕಿಂತು) ಆದರೆ ಆ ಶಿವನಿಗೂ ಈ ಮುಕ್ತಾತ್ಮರಿಗೂ ಇರುವ ವ್ಯತ್ಯಾಸವೇನು ಎಂದರೆ (ಏತೇ) ಈ ಮುಕ್ತಾತ್ಮರು (ತತ್ಪ್ರಸಾದತಃ) ಆ ಪರಶಿವನ ಪ್ರಸಾದದ ದೆಸೆಯಿಂದ (ಮುಕ್ತಾಃ) ಮುಕ್ತರಾದವರು. (ಸ ಏಕಃ) ಆ ಪರಶಿವನು ಒಬ್ಬನೇ (ಅನಾದಿಮುಕ್ತಃ) ಅನಾದಿಮುಕ್ತನು. ಮತ್ತು (ಪಂಚಮಂತ್ರ ತನುಃ) ಪಂಚಮಂತ್ರರೂಪವಾದ ಈಶಾನಾದಿ ಶಕ್ತಿಗಳೇ ಶರೀರವಾಗಿ ಉಳ್ಳವನು ಎಂದು (ವಿಜ್ಞೇಯಃ) ತಿಳಿಯತಕ್ಕವನು.

ವಿಚಾರ :—ಮುಕ್ತಾತ್ಮರು ಶಿವಸಾಮ್ಯವನ್ನು ಪಡೆದವರು. ಅಪಿ ಶಬ್ದವು ವಿದ್ಯೇಶ್ವರ ಮೊದಲಾದವರಿಗೆ ಉಪಲಕ್ಷಕ. ಎಂದರೆ ವಿದ್ಯೇಶ್ವರ ಮೊದಲಾದವರು ಪಶುತ್ವಕ್ಕೆ ಕಾರಣವಾದ ಮಲರಹಿತರು. ಆದ್ದರಿಂದ ಅವರು ಶಿವಸ್ವರೂಪರೇ ! ಮಲಸಂಬಂಧವುಳ್ಳವರೇ ಪಶುಗಳು. 'ಪಶುಃ ಪಶುತ್ವ ಸಂಯೋಗಾತ್' (ಶ್ರುತಿ). ಶಿವತ್ವವೆಂದರೆ ಸರ್ವಜ್ಞತ್ವಾದಿಯೋಗ. ಆದ ರಿಂದಲೇ ಅವರಿಗೂ ಶಿವತ್ವವುಂಟು. ಬೈಂದವ ಶರೀರವು ಮಾತ್ರ ಅಧಿಕಾರ ಮಲಾಂಶಾವಶೇಷ. ಅದು ಅಧಿಕಾರನಿಬಂಧಕ್ಕೆ ಒಳಪಟ್ಟದು. ಮಾಯೆಗೆ ಮೀರಿದುದು, ಮಲವಿಲ್ಲದುದು. ಆದುದರಿಂದಲೇ ವಿದ್ಯಾ, ವಿದ್ಯೇಶ್ವರತ್ವ ಪ್ರಾಪ್ತಿಯೂ ಅಪರಮುಕ್ತಿಯೆನಿಸುವುದು. ಹಾಗಾದರೆ ಮಂತ್ರೇಶ್ವರರಿಗೆ ಕಲಾದಿಯೋಗವು ಹೇಗೆ ಅನ್ವಯಿಸುತ್ತದೆ? ಎಂದರೆ ಅವರು ಸಾಕ್ಷಾತ್ ಶಿವ ನಿಂದ ಅನುಗ್ರಹೀತರು. ಆದ್ದರಿಂದಲೇ ಅವರು ಸರ್ವಜ್ಞರು. ಅವರಿಗೆ ಮಲಸಂಪರ್ಕವಿಲ್ಲ. ಅಂಥವರಿಗೆ ಕಲಾದಿಯೋಗ ಹೇಗಾಯಿತು ? ಎಂದರೆ 'ಕಲಾಯೋಗೇಽಪಿ ನೋ ವಶ್ಯಾಃ ಖಲಾನಾಂ ಪಶುಸಂಘವತ್' 'ಪಶು ಸಂಘ

ದಲ್ಲಿರುವ ಖಲ (ನೀಚ) ರು ಹೇಗೆ ವಶ್ಯರಲ್ಲವೋ ಹಾಗೆ' ಎಂಬ ಉಕ್ತಿಯಂತೆ ಮಾಯಾಗರ್ಭಾಧಿಕಾರ ಮತ್ತು ಮಲಾಂಶಾವಶೇಷಗಳ ದೆಸೆಯಿಂದ ಅವರಿಗೆ ಅಧಿಕಾರ ನಿಬಂಧನ ಮತ್ತು ಕಲಾದಿಯೋಗವು ತಪ್ಪಿದ್ದಲ್ಲ.

ಇನ್ನು ಶಿವತ್ವವು ಸಮಾನವಾಗಿರುವಾಗ ಮುಕ್ತಾತ್ಮರಿಗೂ ಶಿವನಿಗೂ ಇರುವ ಅಂತರವೇನು ? ಎಂದರೆ 'ಕಿಂತ್ವೇತೇ ತತ್ಪ್ರಸಾದತೋ ಮುಕ್ತಾಃ" ಎಂದು ಹೇಳಲಾಗಿದೆ. ಎಂದರೆ ಹಿಂದೆ ಹೇಳಿದ ವಿದ್ಯೇಶ್ವರ ಮೊದಲಾದವರು ಪರಮೇಶ್ವರನ ಅನುಗ್ರಹ ದಿಂದ ಮುಕ್ತರಾದವರು. ಪರಶಿವನು ಮಾತ್ರ ಅನಾದಿಮುಕ್ತ. ಎಂದರೆ 'ಸ್ವಭಾವಸಿದ್ಧ ನಿತ್ಯ ನಿರ್ಮಲ ನಿರತಿಶಯಾರ್ಥ ಜ್ಞಾನ ಕ್ರಿಯಾಶಕ್ತಿ ಯುಕ್ತ" ಎಂದು ಅರ್ಥ.

ಸಂದೇಹ :—ಈ ಈಶ್ವರನಿಗೂ ಕೂಡ "ಪಂಚವಕ್ತ್ರ ಮತ್ತು ತ್ರಿಪಂಚನೇತ್ರ" ಎಂದು ಮುಂತಾಗಿ ಆಗಮಗಳಲ್ಲಿ ಶರೀರೇಂದ್ರಿಯಾದಿ ಗಳನ್ನು ಹೇಳಲಾಗಿದೆಯಲ್ಲವೆ ?

ಸಮಾಧಾನ:—ನಿಜ ; ಅವನು "ಪಂಚಮಂತ್ರತನುಃ" ಎಂದರೆ ಧ್ಯಾನ ಕ್ಕಾಗಿಯೇ ಈಶ್ವರನಿಗೆ ಪಂಚವಕ್ತ್ರ ಮುಂತಾದ ಆಕಾರವು ಉಕ್ತವಾಗಿದೆ. ನಿರಾಕಾರವು ಧ್ಯಾನ ಪೂಜಾದಿಗಳಿಗೆ ಎಟುಕುವುದಿಲ್ಲ. 'ಆಕಾರವಾನ್ತ್ವಂ ನಿಯಮಾದುಪಾಸ್ಯೋ ನ ವಸ್ತ್ವನಾಕಾರಮುಪೈತಿ ಬುದ್ಧಿಃ" ಎಂದು, ಪೌಷ್ಕರದಲ್ಲಿ ಹೇಳಿದೆ. "ಸಾಧಕಸ್ಯತು ಲಕ್ಷ್ಯಾರ್ಥಂ ತಸ್ಯರೂಪಮುದಾಹೃತಮ್" ಎಂದೂ, ಮೃಗೇಂದ್ರದಲ್ಲಿ ವಪುಷೋ ವಿದ್ಯಮಾನತ್ವಾತ್ ಯದ್ಯತ್ಕೃತ್ಯಂ ಕರೋತಿ ಸಃ। ತತ್ರತತ್ರಾರ್ಥೀ ತತ್ಕರ್ತೃ ವಪುಷಾಸುಕೃತಂ ವಪುಃ" ಎಂದೂ ಸಮರ್ಥಿಸಲಾಗಿದೆ. ಆದುದರಿಂದ ಪಂಚಮಂತ್ರಾತ್ಮಕವಾದ ಪಂಚ ಕೃತ್ಯಗಳಿಗೆ ಉಪಯುಕ್ತವಾದ ಈಶಾನ ಮೊದಲಾದ ಶಕ್ತಿಗಳೇ ಅವನ ಶರೀರ ಕಾರ್ಯವನ್ನು ಮಾಡುತ್ತಾ ಔಪಚಾರಿಕವಾಗಿ "ತನು" ಎಂದು ಹೇಳಲ್ಪಡುತ್ತವೆ. 'ತದ್ವಪುಃ ಪಂಚಭಿಃ ಮಂತ್ರೈಃ ಪಂಚಕೃತ್ಯೋಪ ಯೋಗಿಭಿಃ । ಈಶಾನತತ್ಪುರುಷಾಘೋರವಾಮಾದ್ಯೈರ್ಮಸ್ತಕಾದಿಕಮ್ ॥

ಪರಶಿವನಿಗೆ ನಾದ, ಬಿಂದು, ಪದ, ವರ್ಣ ಮತ್ತು ವಾಕ್ಯ ಎಂಬ ಐದು ಮಂತ್ರಗಳೇ ಶರೀರ. 'ತಸ್ಯೋಷ್ಣಿಗ್ಲೋಮಾನಿ, ತೇದ್ಗಾಯತ್ರೀ,

ತ್ರಿಷ್ಟುಪ್ಮ್ಯಾಂ ಸಮನುಷ್ಟುಪ್ ಸ್ನಾವಾನಸ್ಥಿ ಜಗತೀ ಪಂಕ್ತಿರ್ಮಜ್ಜಾಪ್ರಾಣೋ ಬೃಹತೀ" ಎಂದು ಶ್ರುತಿಯಲ್ಲಿ ವೈದಿಕಮಂತ್ರಗಳು ಧಾತುಮಯವೆಂದು ಹೇಳಿರುವುದರಿಂದ ಶಿವನು ಮಂತ್ರ ಶರೀರಿ.

ಪಂಚಮಂತ್ರತನುಃ ಶ್ರೀಮಾನ್‌ಸಕಲಂ ಪರಿಪಶ್ಯತೇ ।
ಯೋಗ ಯೋಗೀಶ್ವರಃ ಸ್ವಾಮಿೂ ಸ್ವತಂತ್ರಃ ಪಶುಪಾಶಹಾ ॥
ಈಶಾನಮೂರ್ಧಾ ಪುಂ ವಕ್ತ್ರೋ ಹ್ಯಘೋರ ಹೃದಯಃ ಪ್ರಭುಃ ।
ಉಚ್ಯತೇ ವಾಮಗುಹ್ಯೋಽಯಂ ಸದ್ಯಮೂರ್ತಿರ್ಮಹೇಶ್ವರಃ ॥
ಏವಂ ಮಂತ್ರಾಸ್ತು ಪಂಚೈತೇ ಯೈರ್ನಿಬದ್ಧಾ ತನುಃ ಶಿವಾ ॥
—ಪಾರಮೇಶ್ವರೇ

ಓಂಕಾರರೂಪಮೃಗ್ವಕ್ತ್ರಂ ಸಾಮಜಿಹ್ವಾಸಮನ್ವಿತಮ್ ।
ಯಜುರ್ವೇದಮಹಾಗ್ರೀವಮಥರ್ವೋಷ್ಮಮಜಂ ವಿಭುಮ್ ॥ (ಲೈಂಗ್ಯೇ)

ಎಂದು ಹೇಳಿದೆ. ಇದರಿಂದ ಶಿವನು ಬೀಜ, ಬಿಂದು, ನಾದ, ಶಕ್ತಿ, ಶಾಂತಿ ಎಂಬ ಪಂಚಾತ್ಮಕಪ್ರಣವತನು ಎಂದು ಸಿದ್ಧವಾಗಿದೆ.

ಮೇಲೆ ಹೇಳಿದ ಪಂಚಶಕ್ತಿಗಳಿಂದ ಶಿವನ ಪಂಚಕೃತ್ಯಗಳನ್ನು ಹೇಳುತ್ತಾನೆ.

ಪಂಚವಿಧಂ ತತ್ಕೃತ್ಯಂ
ಸೃಷ್ಟಿ ಸ್ಥಿತಿ ಸಂಹೃತಿ ತಿರೋಭಾವಾಃ ।
ತದ್ವದನುಗ್ರಹಕರಣಂ
ಪ್ರೋಕ್ತಂ ಸತತೋದಿತಸ್ಯಾಸ್ಯ ॥೭॥

(ತತ್ಕೃತ್ಯಂ) ಆ ಪರಮೇಶ್ವರನ ಕಾರ್ಯವು (ಪಂಚವಿಧಂ) ಐದು ಪ್ರಕಾರ ವಾಗಿದೆ. (ಸೃಷ್ಟಿಸ್ಥಿತಿಲಯತಿರೋಭಾವಾಃ) ಉತ್ಪತ್ತಿ, ಸಂರಕ್ಷಣ, ಸಂಹಾರ, ಮತ್ತು ತಿರೋಭಾವಗಳೆಂದೂ (ತದ್ವತ್) ಹಾಗೆಯೇ (ಅನುಗ್ರಹ ಕರಣಂ) ಅನುಗ್ರಹವನ್ನು ಉಂಟುಮಾಡುವುದು ಎಂಬ ಐದು ಕೃತ್ಯಗಳು (ಸತತೋದಿತಸ್ಯ) ನಿತ್ಯಮುಕ್ತನಾಗಿರುವ (ಅಸ್ಯ) ಈ ಶಿವನಿಗೆ ಉಂಟು ಎಂದು (ಪ್ರೋಕ್ತಂ) ಹೇಳಲ್ಪಟ್ಟಿದೆ.

ವಿಚಾರ :—ಸೃಷ್ಟಿ ಮೊದಲಾದ ಪಂಚಕೃತ್ಯಗಳ ವಿವರವು ಹೀಗಿದೆ. ಈ ಸೃಷ್ಟಿಯನ್ನು ಶುದ್ಧಾಧ್ವದಲ್ಲಿ ಅನಂತೇಶ್ವರನಿಂದ ಮಾಡಿಸುವನು.

ಅಶುದ್ಧಾಧ್ವದಲ್ಲಿ ಶ್ರೀಕಂಠೇಶ್ವರನಿಂದ ಮಾಡಿಸುವನು. "ಶುದ್ಧಾಧ್ವನಿ ಶಿವಃ ಕರ್ತಾ ಪ್ರೋಕ್ತೋಽನಂತೋಽಸಿ ತೇ ಪ್ರಭುಃ" ಎಂಬ ಶ್ರುತಿ ಈ ವಿಷಯವನ್ನು ಸಮರ್ಥಿಸುತ್ತದೆ. ಶಿವನ ಸಂಕಲ್ಪವಾದೊಡನೆಯೇ ಬಿಂದುವೆಂಬ ಉಪಾದಾನದ ದೆಸೆಯಿಂದ ಶುದ್ಧ ತತ್ತ್ವಭುವನವು ಭುವನಜ ದೇಹಗಳನ್ನೂ, ನಾದಾದಿಗಳ ಮೂಲಕ ಶಬ್ದಾದಿಗಳನ್ನೂ ಹುಟ್ಟಿಸುವುದು ಶುದ್ಧಾಧ್ವ ಸೃಷ್ಟಿ. ಮಾಯೆಯೆಂಬ ಉಪಾದಾನದ ದೆಶೆಯಿಂದ ಆಯಾ ಜೀವಿಗಳ ಕರ್ಮಾನುಗುಣವಾಗಿ ಅಶುದ್ಧ ತತ್ತ್ವಭುವನವು ಸೂಕ್ಷ್ಮದೇಹ ಮತ್ತು ಸ್ಥೂಲದೇಹಗಳನ್ನು ಅನಂತಾದಿಗಳ ಮೂಲಕ ಹುಟ್ಟಿಸುವುದು ಅಶುದ್ಧಾಧ್ವಸೃಷ್ಟಿ. ಸ್ಥಿತಿ ಎಂದರೆ ಪಾಲನ. ಹೀಗೆ ಹುಟ್ಟಿಸಿದ ಜಗತ್ತನ್ನು ಅವರವರ ವಿಷಯದಲ್ಲಿ ಇರಿಸಿಕೊಂಡಿರುವುದು ಸ್ಥಿತಿ. ಶುದ್ಧತತ್ತ್ವಭುವನ ಮೊದಲಾದುವನ್ನು ಅದಕ್ಕೆ ಉಪಾದಾನವಾದ ಬಿಂದುವಿನಲ್ಲಿ ಅಡಗಿಸುವುದೂ, ಅಶುದ್ಧತತ್ತ್ವ ಭುವನಾದಿಗಳನ್ನು ಅದಕ್ಕೆ ಉಪಾದಾನವೆನಿಸಿದ ಮಾಯೆಯಲ್ಲಿ ಅಡಗಿಸುವುದೂ ಸಂಹಾರ. ತಮ್ಮ ತಮ್ಮ ಅಸಾಧಾರಣ ಕಾರಣಗಳಲ್ಲಿ ಕಾರ್ಯಲಯವೇ ಸಂಹಾರ. ಪಾಶಗಳನ್ನು ತಮ್ಮ ತಮ್ಮ ವ್ಯಾಪಾರದಲ್ಲಿ ಸಾಮರ್ಥ್ಯವುಳ್ಳವುಗಳನ್ನಾಗಿ ಮಾಡಿ ಆತ್ಮರಿಗೆ ಭೋಗವನ್ನುಂಟುವುದು ,ತಿರೋಭಾವ. ಎಂದರೆ ಜೀವರನ್ನು ಪಾಶಗಳಲ್ಲಿ ಮುಚ್ಚಿಡುವುದು ಎಂದು ಅರ್ಥ. ಮಲ ಮೊದಲಾದ ಪಾಶಗಳನ್ನು ತೊಲಗಿಸಿ ಜೀವರಿಗೆ ಸರ್ವಜ್ಞತ್ವ ಮತ್ತು ಸರ್ವಕರ್ತೃತ್ವರೂಪವಾದ ಶಿವತ್ವವನ್ನು ಕರುಣಿಸಿ, ಪರಾಪರ ಮೋಕ್ಷವನ್ನು ಕೊಡುವುದು ಅನುಗ್ರಹ,

ಸಂದೇಹ:—"ಸೃಷ್ಟಿ ಸಂರಕ್ಷಣಾದಾನಭಾವಾನುಗ್ರಹಕಾರಿಣಃ" ಎಂಬ ರೌರವಾದಿ ಶ್ರುತಿಗಳಲ್ಲಿ ವಿದ್ಯಾವಿದ್ಯೇಶ್ವರಾದಿಗಳಿಗೂ ಕೂಡ ಪಂಚಕೃತ್ಯಾಧಿಕಾರಿತ್ವವನ್ನು ಹೇಳಿದೆ. ಅಂದಮೇಲೆ ಈ ಪಂಚಕೃತ್ಯಾಧಿಕಾರಿತ್ವವು ನಿತ್ಯಮುಕ್ತನಾದ ಪರಶಿವನಿಗೆ ಮಾತ್ರ ಎಂದು ಹೇಗೆ ಹೇಳುವುದು ?

ಸಮಾಧಾನ :—ನಿಜ; ಅವರಿಗೂಕೂಡ ಶಿವಪ್ರೇರಣೆಯಿಂದ ಪಂಚಕೃತ್ಯಾಧಿಕಾರಿತ್ವವುಂಟು. ಆದ್ದರಿಂದ ಹಾಗೆ ಹೇಳಿದೆ.

ಹೀಗೆ ಪತಿಪದಾರ್ಥ ಭೇದವನ್ನು ಹೇಳಿ, ಪಶುಪದಾರ್ಥ ಭೇದವನ್ನು ಹೇಳುತ್ತಾನೆ.

ಪಶವಸ್ತ್ರಿವಿಧಾ ಜ್ಞೇಯಾಃ
ವಿಜ್ಞಾನಪ್ರಳಯಕೇವಲಾ[1]ಸ್ಸಕಲಃ[2] ।
ಮಲಯುಕ್ತಸ್ತತ್ರಾದ್ಯೋ
ಮಲಕರ್ಮಯುತೋ ದ್ವಿತೀಯಸ್ಸ್ಯಾತ್[3] ॥೮॥

(ಪಶವಃ) ಪಶುಗಳು (ತ್ರಿವಿಧಾಃ) ಮೂರುವಿಧವಾಗಿದ್ದಾರೆ ಎಂದು (ಜ್ಞೇಯಾಃ) ತಿಳಿಯತಕ್ಕದ್ದು. ಅವರು (ವಿಜ್ಞಾನಪ್ರಳಯಕೇವಲಾಃ) ವಿಜ್ಞಾನಕೇವಲ ಮತ್ತು ಪ್ರಳಯಕೇವಲರೆಂದೂ (ಸಕಲ) ಸಕಲರೆಂದೂ ಹೇಳಲ್ಪಡುತ್ತಾರೆ. (ತತ್ರ) ಈ ಮೂವರಲ್ಲಿ (ಆದ್ಯಃ)ಮೊದಲ ವಿಜ್ಞಾನಕೇವಲ ವರ್ಗವು (ಮಲಯುಕ್ತಃ) ಮಲಪಾಶದಿಂದಕೂಡಿದೆ. (ದ್ವಿತೀಯಃ)ಎರಡನೆಯ ಪ್ರಳಯಕೇವಲವರ್ಗವು (ಮಲಕರ್ಮಯುತಃ) ಮಲ ಮತ್ತು ಕರ್ಮ ಎಂಬ ಎರಡು ಪಾಶಗಳಿಂದ (ಸ್ಯಾತ್) ಕೂಡಿದೆ.

ವಿಚಾರ :—ಪಾಶಗಳ ವಿಷಯವನ್ನು ಮುಂದೆ ಹೇಳಲಾಗುತ್ತದೆ. ಪಾಶಬದ್ಧರಾದವರೇ ಪಶುಗಳು.

ಸಂದೇಹ:—ಶರೀರಾದಿಗಳಿಗೆ ಅತಿರಿಕ್ತನೂ ಇಹಪರ ಲೋಕಸಂಚಾರಿಯೂ ಆದ "ಸಂಸಾರಿ ಪಶು" ಎಂಬ ಒಂದು ವಸ್ತು ಇದೆಯೆ ?

ಸಮಾಧಾನ:—ಉಂಟು. ಶರೀರಾದಿಗಳಿಗೆ ಬೇರೆಯಾದವನೂ ನಿತ್ಯನೂ ಆದ ಜೀವನು ಜಾತಿಸ್ಮೃತಿ ಮೊದಲಾದ ಪ್ರಮಾಣಗಳಿಂದ ಉಂಟು ಎಂದು ತಿಳಿದು ಬಂದಿದೆ. ಆ ವಿಷಯವನ್ನು

ಬುದ್ಧೀಂದ್ರಿಯ ಶರೀರೇಭ್ಯೋ ವ್ಯತಿರಿಕ್ತೋ ವಿಭುಃ ಧ್ರುವಃ ।
ಅಸ್ತ್ಯೇವ ಕಲ್ಪಿತಾತ್ಮೇತಿ ಹೇತುಸ್ತತ್ರ ಸುದುರ್ಗಮಃ ॥
ಬುದ್ಧೀಂದ್ರಿಯ ಶರೀರಾಣಾಂ ನಾತ್ಮತಾ ಸದ್ಭಿರಿಷ್ಯತೇ ।
ಸ್ಮೃತೇರನಿಯತಜ್ಞಾನಾದಯಾವದ್ದೇಹವೇದನಾತ್ ॥

—ಶ್ರೀ ವಾಯವೀಯೇ

ಎಂಬ ಶ್ರುತಿ ಸಮರ್ಥಿಸಿದೆ. ಆದ್ದರಿಂದ ಅಂಥ ಆತ್ಮನೊಬ್ಬನುಂಟು.

---

[1]ಪ್ರ (ವಿ) ಲಯಾಕಲಾಃ (ಗ) [2]ಸಕಲಾಃ (ಗ) [3]ದ್ವಿತೀಯಶ್ಚ (ಗ)

ವಿಜ್ಞಾನ ಕೇವಲ ವರ್ಗವು "ವಿಜ್ಞಾನಯೋಗ ಸಂನ್ಯಾಸೈರ್ಭೋಗಾದ್ವಾಕರ್ಮಣಃ ಕ್ಷಯಾತ್" ಎಂಬ ಪ್ರಮಾಣದಂತೆ ಸುಜ್ಞಾನಯೋಗ ಅಥವಾ ಸಂನ್ಯಾಸಾದಿಗಳಿಂದ, ಇಲ್ಲವೆ ಭೋಗದಿಂದ ಕರ್ಮಕ್ಷಯುವಾಗಿರುವುದರಿಂದ ಕೇವಲ ಮಲದಿಂದ ಕೂಡಿದೆ. ಎರಡನೆಯ ಪ್ರಳಯ ಕೇವಲ ವರ್ಗವು ಮಾತ್ರ ಪ್ರಳಯದಲ್ಲಿ ಕಲಾದಿಗಳು ಉಪಸಂಹಾರ ವಾಗುವುದರಿಂದ ಅದು ಮಲ ಮತ್ತು ಕರ್ಮ ಎಂಬ ಎರಡರಿಂದ ಕೂಡಿದೆ.

ಮಲಮಾಯಾಕರ್ಮಯುತಃ
　　ಸಕಲಸ್ತೇಷು ದ್ವಿಧಾ ಭವೇದಾದ್ಯಃ ।
ಆದ್ಯಃ ಸಮಾಪ್ತಕಲುಷೋಽ
　　ಸಮಾಪ್ತ ಕಲುಷೋ ದ್ವಿತೀಯಃ ಸ್ಯಾತ್ ॥೯॥

(ಸಕಲಃ) ಸಕಲವೆಂಬ ವರ್ಗವು (ಮಲಮಾಯಾಕರ್ಮಯುತಃ) ಮಲ, ಮಾಯಾ ಮತ್ತು ಕರ್ಮವೆಂಬ ಮೂರು ಪಾಶಗಳಿಂದ ಕೂಡಿದೆ. (ತೇಷು) ಆ ಮೂರು ವರ್ಗಗಳಲ್ಲಿ (ಆದ್ಯಃ) ಮೊದಲನೆಯ ವಿಜ್ಞಾನಕೇವಲ ವರ್ಗವು (ದ್ವೇಧಾ) ಮತ್ತೆ ಎರಡು ವಿಧವಾಗಿ (ಭವೇತ್) ಆಗುತ್ತದೆ. ಯಾವುದೆಂದರೆ (ಆದ್ಯಃ) ಅವುಗಳಲ್ಲಿ ಮೊದಲನೆಯದು (ಸಮಾಪ್ತ ಕಲುಷಃ) ಪರಿಪಕ್ವಮಲವುಳ್ಳದ್ದು. (ದ್ವಿತೀಯಃ) ಎರಡನೆಯದು (ಅಸಮಾಪ್ತ ಕಲುಷಃ) ಪರಿಪಕ್ವವಲ್ಲದ ಮಲವುಳ್ಳದ್ದು (ಸ್ಯಾತ್) ಆಗುತ್ತದೆ.

ವಿಚಾರ :—ಸಕಲನು ಬಂದತ್ರಯದಿಂದ ಕೂಡಿದವನು. ಅವನಿಗೆ ಮಾಯೆಯ ಸಾಕ್ಷಾತ್ ಸಂಬಂಧವಿಲ್ಲ. ಇಲ್ಲಿ ಮಾಯೆ ಎಂದರೆ ಅದರ ಕಾರ್ಯ ವೆನಿಸಿರುವ ಕಲಾದಿಗಳು, ಅಂಥ ಕಲಾದಿಗಳಿಂದ ಕೂಡಿರುವುದರಿಂದಲೇ ಇವನು ಸಕಲನೆನಿಸಿದ್ದಾನೆ. ಆದುದರಿಂದ ಇವನಿಗೆ ವಿಜ್ಞಾನಾದಿಗಳಿಂದ ಕರ್ಮಕ್ಷಯವಾದರೂ ಸಂಸ್ಕಾರವಶದಿಂದ ಕೆಲವು ಕಾಲ ಶರೀರಸ್ಥಿತಿಯುಂಟು. ಮಲ ಮತ್ತು ಮಾಯೆಗಳಿಂದ ಕೂಡಿದ್ದರೂ ಕೂಡ ಸಕಲನೆಂಬ ಪ್ರಭೇದವು ಶಾಸ್ತ್ರೋಕ್ತವಾಗಿದೆ. "ಸಮ್ಯಕ್ ಜ್ಞಾನಾಧಿಗಮಾತ್ ಧರ್ಮಾದೀನಾಮ ಕರಣಪ್ರಾಪ್ತೌ । ತಿಷ್ಠತಿ ಸಂಸ್ಕಾರವಶಾಚ್ಚಕ್ರಭ್ರಮವದ್ಧೃತ ಶರೀರಃ" ॥ ಎಂಬ ಉಕ್ತಿ ಇದನ್ನು ಸಮರ್ಥಿಸುತ್ತದೆ.

ಇನ್ನು ಮೊದಲನೆಯ ವಿಜ್ಞಾನಕೇವಲವರ್ಗವನ್ನು ಎರಡುಭಾಗವಾಗಿ ವಿಂಗಡಿಸಿ

ಅವರನ್ನು ಪಕ್ವಮಲ (ಸಮಾಪ್ತಕಲುಷ) ಮತ್ತು ಅಪಕ್ವಮಲ (ಅಸಮಾಪ್ತಕಲುಷ) ರೆಂದು ಹೆಸರಿಸುತ್ತಾನೆ, ಮತ್ತು ಇವರಿಗೆ ಲಭಿಸುವ ಪದವಿಗಳನ್ನು ಸಹ ನಿರೂಪಿಸುತ್ತಾನೆ.

ಆದ್ಯಾನನುಗೃಹ್ಯ ಶಿವೋ
ವಿದ್ಯೇಶತ್ವೇ ನಿಯೋಜಯತ್ಯಷ್ಟೌ ।
ಮಂತ್ರಾಂಶ್ಚ ಕರೋತ್ಯಪರಾನ್
ತೇ ಚೋಕ್ತಾಃ ಕೋಟಯಃ ಸಪ್ತ ॥೧೦॥

(ಶಿವಃ) ಪರಮೇಶ್ವರನು (ಆದ್ಯಾನ್) ಸಮಾಪ್ತ ಕಲುಷ (ಪರಿಪಕ್ವಮಲ) ರಾದ ವಿಜ್ಞಾನಕಲರನ್ನು ದೀಕ್ಷಾಪೂರ್ವಕವಾದ ಶ್ರವಣಮನನಗಳಿಂದ (ಅನುಗೃಹ್ಯ) ಪರೋಕ್ಷಜ್ಞಾನವನ್ನು ನೀಡುವುದರಮೂಲಕ ಅನುಗ್ರಹಿಸಿ ಎಂದರೆ ಮಲವನ್ನು ತೊಲಗಿಸಿ, ಸರ್ವಜ್ಞತ್ವಾದಿಯುಕ್ತರನ್ನಾಗಿ ಮಾಡಿ (ಅಷ್ಟೌ) ಅನಂತೇಶ್ವರ ಮೊದಲಾದ ಎಂಟು ಜನರನ್ನು (ವಿದ್ಯೇಶತ್ವೇ) ವಿದ್ಯೇಶ್ವರಪದವಿ (ಮುಕ್ತಿಗೆಸಮ) ಯಲ್ಲಿ (ನಿಯೋಜಯತಿ) ಸೇರಿಸುತ್ತಾನೆ. (ಅಪರಾಂಶ್ಚ) ಅಸಮಾಪ್ತಕಲುಷ (ಅಪಕ್ವಮಲ) ರನ್ನು (ಮಂತ್ರಾನ್) ಮಂತ್ರ ದೇವತಾರೂಪರನ್ನಾಗಿ (ಕರೋತಿ) ಮಾಡುತ್ತಾನೆ. (ತೇ ಚ) ಆ ಮಂತ್ರಗಳಾದರೋ (ಸಪ್ತ ಕೋಟಯಃ) ಏಳುಕೋಟಿ ಎಂದು (ಉಕ್ತಾಃ) ಹೇಳಲ್ಪಟ್ಟವೆ.

ವಿಚಾರ—ಪಕ್ವಮಲರು ಎಂದರೆ ಪಾಕತಾರತಮ್ಯದಿಂದ ಅಧಿಕಾರ ಯೋಗ್ಯರು ಎಂದು ಅರ್ಥ. ಪರಶಿವನು ಅಂಥವರ ಮಲವನ್ನು ಕಳೆದು ಸರ್ವಜ್ಞತ್ವಾದಿ ಯುಕ್ತರನ್ನಾಗಿಯೂ, ಬೈಂದವ ಶರೀರವುಳ್ಳವರನ್ನಾಗಿಯೂ ಮಾಡಿ, ಅವರಲ್ಲಿ ಎಂಟು ಜನರನ್ನು ವಿದ್ಯೇಶ್ವರ ಪದವಿಯಲ್ಲಿ ನಿಯೋಜಿಸುತ್ತಾನೆ. ಅನಂತ, ಸೂಕ್ಷ್ಮ, ಶಿವೋತ್ತಮ, ಏಕನೇತ್ರ, ಏಕರುದ್ರ, ತ್ರಿಮೂರ್ತಿ. ಶ್ರೀಕಂಠ, ಶಿಖಂಡಿ ಎಂಬುವರು ಅಷ್ಟವಿದ್ಯೇಶ್ವರರು. ಪಂಚಕೃತ್ಯ (ಸೃಷ್ಟಿ, ಸ್ಥಿತಿ, ಲಯಃ ತಿರೋಧಾನ ಮತ್ತು ಅನುಗ್ರಹ) ಗಳಿಗೆ ಅಧಿಕಾರಿಗಳಾದ ಇವರು ಶುದ್ಧಾಧ್ವಕ್ಕೆ ಅಧಿಷ್ಠಾತೃಗಳು ಮತ್ತು ಈಶ್ವರತತ್ತ್ವನಿವಾಸಿಗಳು. ಉಳಿದವರನ್ನು ಅನುಗ್ರಹಕ್ಕೆ ಕಾರಣವಾದ ಏಳು ಕೋಟಿ ಮಂತ್ರಗಳನ್ನಾಗಿಯೂ, ವಿದ್ಯಾತತ್ತ್ವನಿವಾಸಿಗಳನ್ನಾಗಿಯೂ ಮಾಡುತ್ತಾನೆ. ಇದನ್ನೇ ಸಿದ್ಧಾಂತ ಹೃದಯದಲ್ಲಿ 'ವಿದ್ಯೇಶ್ವರಾನ್ ಕರೋತ್ಯಷ್ಟಾವಿಶೋಽನ್ಯಾನ್

ಮನುದೇವತಾಃ" ಎಂದು ಹೇಳಿದೆ. ಆ ಏಳುಕೋಟಿಯಲ್ಲಿ ಅರ್ಧಭಾಗವು ಶಿವನ ಅನುಗ್ರಹಕರ್ಮದಲ್ಲಿ ಸಾಧನವಾಗಿದ್ದುಕೊಂಡು ಮಹಾಪ್ರಳಯದಲ್ಲಿ ಮೋಕ್ಷವನ್ನು ಹೊಂದುತ್ತದೆ. ಉಳಿದ ಅರ್ಧವು ನಿರಧಿಕರಣನಾದ ಶಿವನ ವಿಜ್ಞಾನ ಕಲಾದಿ ವಿಷಯದಲ್ಲಿ ಮತ್ತು ಮಂತ್ರೇಶ್ವರ ಮಾಯಾಗರ್ಭಾಧಿಕರಣ ವಿಷಯದಲ್ಲಿಯೂ ಕೂಡ ಸಾಧನವಾಗಿದ್ದು ವೈರಾಗ್ಯವನ್ನು ಪಡೆದು ಸೃಷ್ಟಿಯ ತರುವಾಯ ಬಿಡುಗಡೆ (ಮೋಕ್ಷ) ಹೊಂದುತ್ತದೆ. ಎಂಬುದನ್ನು "ಪ್ರಯೋಕ್ತೃದೇಹ ಸಾಪೇಕ್ಷಂ ತದರ್ಧಮಖಿಲೇಽಧ್ವನಿ । ಕೃತ್ವಾಧಿಕಾರಂ ಸ್ಥಿತ್ಯಂತೇ ಶಿವಂ ವಿಶತಿ ಸೇಶ್ವರಮ್ ॥ ವಿನಾಧಿಕರಣೇ ನಾನ್ಯತ್ ಪ್ರಧಾನವಿಕೃತೇರಧಃ । ಕೃತ್ವಾಧಿಕಾರವಿಶೇಷಮುಪೈತಿ ಸ್ವಾಧ್ವಸಂಹೃತೌ ॥" (ಶ್ರೀಮೃಗೇಂದ್ರೇ) ಎಂದು ನಿರ್ವಚನ ಮಾಡಿದೆ. ರೌರವಾದಿಶ್ರುತಿಯಲ್ಲಿ "ಯಾರು ಅತ್ಯಂತ ಪರಿಪಕ್ವಮಲರಾಗಿದ್ದು ಅಧಿಕಾರವನ್ನು ಬಯಸುವುದಿಲ್ಲವೋ ಅಂಥವರನ್ನು ಪರಮಪದವಿಯಲ್ಲಿ ಯೋಜಿಸುತ್ತಾನೆ. ಇನ್ನು ಯಾರು ಅಪಕ್ವಮಲರೋ ಅವರು ಮಲವು ಪಕ್ವವಾಗುವವರೆಗೆ ವಿಜ್ಞಾನಕಲರಾಗಿಯೇ ಉಳಿಯುತ್ತಾರೆ" ಎಂದು ಹೇಳಿದೆ.

ಪ್ರಳಯಾಕಲೇಷು ಯೇಷಾಂ
ಪಕ್ವೇ ಮಲಕರ್ಮಣೀ ವ್ರಜಂತ್ಯನ್ಯೇ ।
ಪುರ್ಯಷ್ಟಕ ದೇಹಯುತಾಃ
ಯೋನಿಷು ನಿಖಿಲಾಸು ಕರ್ಮವಶಾತ್ ॥೧೧॥

(ಪ್ರಳಯಾಕಲೇಷು) ಪ್ರಳಯದಲ್ಲಿ ಅಕಲರೆನಿಸಿದ್ದ ಆತ್ಮರು (ಪ್ರಕರ್ಷೇಣ ಲಯಂ ಗತಂ ಕಲಾದಿಧರಾಂತತತ್ತ್ವಾತ್ಮಕಂ ಶರೀರಂ ಯೇಷಾಂ ತೇ ಪ್ರಳಯಾಕಲಾಃ) ಎಂದರೆ ಪ್ರಳಯಾವಸ್ಥೆಯಲ್ಲಿ ಕೇವಲ ಮಲ ಮತ್ತು ಕರ್ಮ ಎಂಬ ಪಾಶಯುಕ್ತರಾದ ಆತ್ಮರು ಎಂದು ಅರ್ಥ. ಅವರಲ್ಲಿ (ಯೇಷಾಂ) ಯಾರಿಗೆ (ಮಲಕರ್ಮಣೀ) ಮಲ ಮತ್ತು ಕರ್ಮಗಳು (ಪಕ್ವೇ) ಜ್ಞಾನಾಗ್ನಿ ಸಾಹಚರ್ಯದಿಂದ ಪರಿಪಕ್ವವಾಗಿರುವವೋ ಅವರು (ವ್ರಜಂತಿ) ಮೋಕ್ಷವನ್ನು ಹೊಂದುತ್ತಾರೆ. (ಅನ್ಯೇ) ಅಪಕ್ವವಾದ ಮಲ ಕರ್ಮಗಳುಳ್ಳವರು (ಪುರ್ಯಷ್ಟಕ ದೇಹಯುತಾಃ) ಸೂಕ್ಷ್ಮ ಶರೀರಗಳೊಡನೆ ಕೂಡಿದವರಾಗಿ (ಕರ್ಮವಶಾತ್) ತಮ್ಮ ಕರ್ಮವಶರಾಗಿ (ನಿಖಿಲಾಸು)

ದೇವ–ಮನುಷ್ಯ–ತಿರ್ಯಗಾದಿಯಾದ ಸಮಸ್ತ (ಯೋನಿಷು) ಭುವನಜ ದೇಹಗಳಲ್ಲಿ ಸೇರಿ (ವ್ರಜಂತಿ) ಹುಟ್ಟುವರು.

ಸಂದೇಹ :—ಆತ್ಮರು ವ್ಯಾಪಕರೂ, ಅಮೂರ್ತರೂ ಆಗಿರುವುದರಿಂದ ಅವರಿಗೆ ಸಮಸ್ತ ಯೋನಿಗಳಲ್ಲಿ ಹೋಗಿಬರುವುದು ಹೇಗೆ ಅನ್ವಯಿಸುತ್ತದೆ ?

ಸಮಾಧಾನ:—ಜೀವರಿಗೆ ಪುರ್ಯಷ್ಟಕ (ಸೂಕ್ಷ್ಮಶರೀರ)ವೆಂಬ ಉಪಾಧಿಯಿದೆ. ಆದ್ದರಿಂದ ಪಶು ಎನಿಸಿರುವ ಕ್ಷೇತ್ರಜ್ಞ (ಜೀವ) ನಿಗೆ ಗಮನಾಗಮನಗಳು ಸಂಭವಿಸುತ್ತವೆ. ಘಟಾಕಾಶಕ್ಕೆ, ಅದಕ್ಕೆ ಉಪಾಧಿಯಾಗಿರುವ ಘಟದ ಗಮನಾಗಮನಗಳು ಸಂಭವಿಸುವಂತೆ ಇಲ್ಲಿಯೂ ಕೂಡ ಉಪಾಧಿಧರ್ಮಗಳಿಂದ ಕೂಡಿದ ಕ್ಷೇತ್ರಜ್ಞನಿಗೂ ಸಹ ಗಮನಾಗಮನಗಳು ಉಂಟು.

ವಿಚಾರ :—ಪುರ್ಯಷ್ಟಕ ದೇಹವೆಂದರೆ ಸೂಕ್ಷ್ಮಶರೀರ. ಇದರೊಡನೆ ಕೂಡಿದವರು ಸಕಲರು. ಪ್ರಳಯಾಕಲರಲ್ಲಿ ಯಾರ ಮಲವು ಪರಿಪಕ್ವವಾಗಿದೆಯೋ ಅವರಿಗೆ ಆ ಪಾಕದಿಂದಲೇ ಅವರ ಎಲ್ಲ ಕರ್ಮವೂ ಪಕ್ವವಾಗಿರುತ್ತದೆಯೋ ಅವರಿಗೆ ಆ ಪಾಕದಿಂದಲೇ ಅವರ ಎಲ್ಲ ಕರ್ಮವು ಪಕ್ವವಾಗಿರುತ್ತದೆ. ಅಂಥವರಿಗೆ ಮೋಕ್ಷ ಸಿದ್ಧ. ಮಲಪರಿಪಾಕವುಶಕ್ತಿಪಾತದ ಮೂಲಕ ಮೋಕ್ಷಕ್ಕೆ ಕಾರಣ. "ತಮಃ ಶಕ್ತ್ಯಧಿಕಾರಸ್ಯ ನಿವೃತ್ತೇಃ ತತ್ಪರಿಚ್ಯುತೌ। ವ್ಯನಕ್ತಿ ದೃಕ್ಕ್ರಿಯಾನಂತ್ಯಂ ಜಗದ್ಬಂಧುರಣೋಃ ಶಿವಃ" ಎಂದು ಮೃಗೇಂದ್ರದಲ್ಲಿಯೂ "ಕ್ಷೀಣೇ ತಸ್ಮಿನ್ ಧಿಯಾ ಸಾಸ್ಯಾತ್ಪರಂ ನಿಃಶ್ರೇಯಸಂ ಪ್ರತಿ" ಎಂದು ಸ್ವಾಯಂಭುವದಲ್ಲಿಯೂ ಹೇಳಲಾಗಿದೆ.

ಇನ್ನುಳಿದ ಅಪಕ್ವಮಲರು 'ಪುರ್ಯಷ್ಟಕ' ಎಂದರೆ ಸೂಕ್ಷ್ಮಶರೀರಧಾರಿಗಳಾಗಿ ಕರ್ಮಪಾರವಶ್ಯದಿಂದ ಅದನ್ನು ಅನುಭವಿಸಲು ಆಯಾ ದೇಹಗಳನ್ನು ಧರಿಸುತ್ತಾರೆ.

ಆ ಪುರ್ಯಷ್ಟಕ ದೇಹವು ಎಂತಹುದು ಎಂದರೆ ಹೇಳುತ್ತಾನೆ.

ಸ್ಯಾತ್ಪುರ್ಯಷ್ಟಕಮಂತಃ
ಕರಣಂ ಧೀಕರ್ಮಕರಣಾನಿ ।
ಕಾಂಶ್ಚಿದನುಗೃಹ್ಯ ವಿತರತಿ
ಭುವನಪತಿತ್ವಂ ಮಾಹೇಶ್ವರಸ್ತೇಷಾಮ್* ॥೧೨॥

---

*ಈ ಕಾರಿಕೆಯ (ಗ) ಪ್ರತಿಯಲ್ಲಿ ಪೂರ್ವಾರ್ಧ ಮತ್ತು ಉತ್ತರಾರ್ಧಗಳು ವ್ಯತ್ಯಸ್ತವಾಗಿವೆ. (ಸಂ)

(ಅಂತಃಕರಣಂ) ಅಂತಃಕರಣ ಶಬ್ದವು ಮನಸ್ಸು, ಬುದ್ಧಿ ಮತ್ತು ಅಹಂಕಾರ ಎಂಬ ಮೂರು ತತ್ತ್ವಗಳು ಹಾಗೂ ಪುರುಷನ ಭೋಗಕ್ರಿಯೆಯಲ್ಲಿ ಅಂತರಂಗವೆನಿಸಿರುವ ಕಲಾ, ಕಾಲ, ನಿಯತಿ, ವಿದ್ಯೆ, ರಾಗ, ಪ್ರಕೃತಿ ಮತ್ತು ಗುಣಗಳೆಂಬ ಏಳು ತತ್ತ್ವಗಳಿಗೆ ಉಪಲಕ್ಷಕ (ಧೀಃಕರ್ಮಕರಣಾನಿ) ಧೀಕರ್ಮ ಶಬ್ದದಿಂದ ಬುದ್ಧಿಯಿಂದ ನಿಶ್ಚೈಸುವ ಆಕಾಶಾದಿ ಪಂಚಭೂತಗಳು. ಅವಕ್ಕೆ ಕಾರಣವಾದ ಶಬ್ದಾದಿ ಪಂಚತನ್ಮಾತ್ರಗಳು ಹೇಳಲ್ಪಡುತ್ತವೆ. ಕರಣಶಬ್ದದಿಂದ ಪಂಚಜ್ಞಾನೇಂದ್ರಿಯಗಳು ಮತ್ತು ಕರ್ಮೇಂದ್ರಿಯಗಳು ಉಕ್ತವಾಗುತ್ತವೆ.

ಇವಿಷ್ಟು (ಪುರ್ಯಷ್ಟಕಂಸ್ಯಾತ್) ಪುರ್ಯಷ್ಟಕವೆನಿಸುತ್ತವೆ. ಪುರ್ಯಷ್ಟಕವೆಂದರೆ ಸೃಷ್ಟಿಯಿಂದ ಪ್ರಳಯದವರೆಗೆ ಅಥವಾ ಮೋಕ್ಷಾಂತವಾಗಿಯಾದರೂ ಇರುವ ಪೃಥ್ವೀತತ್ತ್ವಮೊದಲು ಕಲಾತತ್ತ್ವದವರೆಗೆ ಇರುವ ಮೂವತ್ತು ತತ್ತ್ವಗಳು. ಇವುಗಳಿಂದ ಕೂಡಿದುದೇ ಸೂಕ್ಷ್ಮದೇಹ. ಇದು ಆತ್ಮನಿಗಿಂತ ಭಿನ್ನ. ಅಂಥ ದೇಹವುಳ್ಳವರ ಮಧ್ಯದಲ್ಲಿ ಕೆಲವು ವಿಶಿಷ್ಟಾಧಿಕಾರಿಗಳನ್ನು ಹೇಳುತ್ತಾನೆ. (ಮಹೇಶ್ವರಃ) ಮಂತ್ರ ಮಹೇಶ್ವರನಾಗಿರುವ ಅನಂತೇಶ್ವರನು (ತೇಷಾಂ) ಆ ಪುರ್ಯಷ್ಟಕ ದೇಹವುಳ್ಳವರಲ್ಲಿ (ಕಾಂಶ್ಚಿತ್) ಕೆಲವರನ್ನು (ಅನುಗೃಹ್ಯ) ಅನುಗ್ರಹಿಸಿ (ಭುವನಪತಿತ್ವಂ) ಭುವನಾಧಿ ಪತಿತ್ವವನ್ನು (ವಿತರತಿ) ಕೊಡುತ್ತಾನೆ. ಈ ಭುವನಪತಿಗಳು ಯಾರು ಎಂದರೆ—ಅಷ್ಟದಿಕ್ಪಾಲಕರು, ಗುಹ್ಯಾಷ್ಟಕರು, ಆದಿಗುಹ್ಯಾಷ್ಟಕರು, ಗುಹ್ಯಾದ್ಗುಹ್ಯಾಷ್ಟಕರು, ಪವಿತ್ರಾಷ್ಟಕರು ಎಂಬ ಪಂಚಾಷ್ಟಕರು.

ವಿಚಾರ :—ಪುರ್ಯಷ್ಟಕವಿಭಾಗದಲ್ಲಿ ವಿವಿಧ ಮತಗಳಿಗೆ ಅವುಗಳನ್ನು ಹೀಗೆ ಸಂಗ್ರಹಿಸಬಹುದು.

೧ ಕಲಾದಿ ಸಪ್ತಕ, ಅಂತಃಕರಣತ್ರಯ, ಇಂದ್ರಿಯದಶಕ, ತನ್ಮಾತ್ರಪಂಚಕ ಮತ್ತು ಭೂತಪಂಚಕ—ಒಟ್ಟು ಮೂವತ್ತು ತತ್ತ್ವಗಳು.

೨ ಶಬ್ದಸ್ಪರ್ಶಸ್ತಥಾ ರೂಪಂ ರಸೋ ಗಂಧಶ್ಚ ಪಂಚಕಂ ।
ಬುದ್ಧಿರ್ಮನಸ್ತ್ವಹಂಕಾರಃ ಪುರ್ಯಷ್ಟಕಮುದಾಹೃತಮ್ ॥

(ಕಾಲೋತ್ತರೇ)

೩ ಭೂತೇಂದ್ರಿಯ ಮನೋ ಬುದ್ಧಿರ್ವಾಸನಾಕರ್ಮವಾಯವಃ ।
ಅವಿದ್ಯಾಚಾಷ್ಟಕಂ ಪ್ರೋಕ್ತಂ ಪುರ್ಯಷ್ಟಕಮೃಷಿಸತ್ತಮೈಃ ॥
೪ ಪುರ್ಯಷ್ಟಕೇನ ಲಿಂಗೇನ ಪ್ರಾಣಾದ್ಯೇನ ಸಹೈವ ಚ ।
ತೇನ ಬದ್ಧಸ್ಯ ವೈ ಬಂಧೋ ಮೋಕ್ಷೋ ಮುಕ್ತಸ್ಯತೇ ನ ತಃ ॥
೫ ಕರ್ಮೇಂದ್ರಿಯಾಣಿ ಖಲು ಪಂಚ ತಥಾಪರಾಣಿ
ಬುದ್ಧೀಂದ್ರಿಯಾಣಿ ಮನ ಆದಿ ಚತುಷ್ಟಯಂ ಚ ।
ಪ್ರಾಣಾದಿಪಂಚಕಮಥೋ ವಿಯದಾದಿಕಂ ಚ
ಕಾಮಶ್ಚ ಕರ್ಮ ಚ ತಮಃ ಪುನರಷ್ಟಮೀ ಪೂಃ ॥

ಮೇಲೆ ಹೇಳಿದ ಪುರ್ಯಷ್ಟಕಾತ್ಮಕವಾದ ಸೂಕ್ಷ್ಮದೇಹದ ವಿಷಯದಲ್ಲಿ 'ಪ್ರಯೋಕ್ತ್ರ್ಯಾದಿ ಮಹೀಪ್ರಾಂತಮೇತದಣ್ವರ್ಥಸಾಧಕಮ್ । ಪ್ರತ್ಯಾತ್ಮ ನಿಯತಂ" ಎಂದೂ ತತ್ತ್ವಸಂಗ್ರಹದಲ್ಲಿ "ವಸುಧಾದ್ಯಸ್ತತ್ತ್ವಗಣಃ ಪ್ರತಿಪುಂನಿಯತಃ ಕಲಾಂತೋಽಯಮ್ । ಪರ್ಯಟತಿ ಕರ್ಮವಶತೋ ಭುವನಜದೇಹೇಷ್ವಯಂ ಚ ಸರ್ವೇಷು ॥" ಎಂದೂ ಹೇಳಿದೆ.

ಸಂದೇಹ—ಕಾಲೋತ್ತರದಲ್ಲಿ "ಶಬ್ದಃಸ್ಪರ್ಶಶ್ಚರೂಪಂ ಚ ರಸೋಗಂಧಶ್ಚಪಂಚಮಃ। ಬುದ್ಧಿರ್ಮನಸ್ತ್ವಹಂಕಾರಃ ಪುರ್ಯಷ್ಟಕಮುದಾಹೃತಮ್॥" ಎಂದು ಈ ಎಂಟನ್ನೇ ಪುರ್ಯಷ್ಟಕವೆಂದು ಹೇಳಿದೆಯಲ್ಲವೆ ?

ಸಮಾಧಾನ—ನಿಜ; ಆದ್ದರಿಂದಲೇ ಆ ಸೂತ್ರಕ್ಕೆ ರಾಮಕಂಠ ಎಂಬ ಆಚಾರ್ಯರು ಮುವತ್ತು ತತ್ತ್ವಗಳ ಪರವಾಗಿ ವ್ಯಾಖ್ಯಾನಮಾಡಿದ್ದಾರೆ. ಆದ್ದರಿಂದ ವಿರೋಧವಿಲ್ಲ.

ಮಲ ಮತ್ತು ಕರ್ಮಯುಕ್ತರಾದ ಪ್ರಳಯಕೇವಲರೆಂಬ ಜೀವವರ್ಗದಲ್ಲಿ ಪರಶಿವನಿಂದ ಅನುಗೃಹೀತರಾದ ಮಯಾಗರ್ಭಾಧಿಗಳನ್ನು ಹೇಳುತ್ತಾನೆ.

ಶೇಷಾ ಭವಂತಿ ಸಕಲಾಃ
ಕಲಾದಿಯೋಗಾದಹರ್ಮುಖೇ ಕಾಲೇ ।
ಶತಮಷ್ಟಾದಶ ತೇಷಾಂ
ಕುರುತೇ ಸ್ವಯಮೇವ ಮಂತ್ರೇಶಾನ್ ॥೧೩॥

(ಶೇಷಾಃ) ಪಕ್ವಮಲರಾಗಿ ಮುಕ್ತರಾದವರ ದೆಸೆಯಿಂದಲೂ, ಅಪಕ್ವ

ಮಲರಾಗಿ ಸಂಸಾರಿಗಳಾದವರ ದೆಸೆಯಿಂದಲೂ ಕೂಡ ಬೇರೆಯವರಾದ ಯಾರು ಪರಿಪಕ್ವಮಲವುಳ್ಳವರೋ ಅವರು (ಅಹರ್ಮೂರ್ಖೇ ಕಾಲೇ) ಸೃಷ್ಟಿ ಕಾಲದಲ್ಲಿ (ಕಲಾದಿಯೋಗಾತ್) ಮಿಶ್ರಾಧ್ವದ ಅಧಿಕಾರಕ್ಕೆ ಯೋಗ್ಯವಾದ ಮಾಯಾ ದೇಹ ಸಂಬಂಧದ ದೆಸೆಯಿಂದ (ಸಕಲಾಃ) ಸಕಲರು (ಭವಂತಿ) ಆಗುತ್ತಾರೆ. ಆದರೆ ಅವರು ಉಳಿದ ಸಕಲರಂತೆ ದೇಹವಶರಲ್ಲ. (ತೇಷಾಂ) ಅವರಲ್ಲಿ (ಶತಂ ಅಷ್ಟಾದಶ) ನೂರಹದಿನೆಂಟು ಜನರನ್ನು ಪರಶಿವನು (ಸ್ವಯಮೇವ) ತಾನೇ (ಮಂತ್ರೇಶಾನ್) ಮಂತ್ರೇಶ್ವರರನ್ನಾಗಿ (ಕುರುತೇ) ಮಾಡುತ್ತಾನೆ.

ವಿಚಾರ :—ಇಲ್ಲಿ 'ಸ್ವಯಮೇವ' ಎಂದುದರಿಂದ ಶಿವನು ತಾನೇ ಎಂದರೆ ಬ್ರಹ್ಮಾದಿಗಳ ಸಹಾಯವನ್ನು ಬಯಸದೆಯೇ ಅವರನ್ನು ಮಲರಹಿತರನ್ನಾಗಿ ಮಾಡಿ ಮಂತ್ರೇಶಪದವಿಯಲ್ಲಿ ನೇಮಿಸುವನೇ ಹೊರತು ಇವರನ್ನು ಅನಂತರು ನಿಯಮಿಸುವುದಿಲ್ಲ ವೆಂದು ತಾತ್ಪರ್ಯ. ಆದರೆ ಕಲಾದಿಯೋಗವು ಮಾತ್ರ ಅವರಿಗೆ ಅನಂತನಿಂದಲೇ. "ಅನಂತೋಽಸಿ ತೇ ಪ್ರಭುಃ" ಎಂಬ ಉಕ್ತಿ ಇದೇ ಅರ್ಥವನ್ನು ಸೂಚಿಸುತ್ತದೆ.

ಅವರನ್ನೇ ವಿವರಿಸಿ ಹೇಳುತ್ತಾನೆ.

ತತ್ರಾಷ್ಟೌ ಮಂಡಲಿನಃ
ಕ್ರೋಧಾದ್ಯಾಸ್ತತ್ಸಮಾಶ್ಚ ವೀರೇಶಃ ।
ಶ್ರೀಕಂಠಃ ಶತರುದ್ರಾಃ
ಶತಮಿತ್ಯಷ್ಟಾದಶಾಭ್ಯಧಿಕಮ್ ॥೧೪॥

(ತತ್ರ) ಆ ನೂರಹದಿನೆಂಟರಲ್ಲಿ (ಮಂಡಲಿನಃ) ಕಲಾಮಸ್ತಕರಾದ ಗಹನೇಶ ಮೊದಲಾದ ಮಂಡಲೇಶ್ವರರು (ಅಷ್ಟೌ) ಎಂಟು ಮಂದಿ (ಕ್ರೋಧಾದ್ಯಾಶ್ಚ) ಗುಣಮಸ್ತಕರಾದ ಕ್ರೋಧೇಶಾದಿಗಳು ಕೂಡ (ತತ್ಸಮಾಃ) ಅವರಿಗೆ ಸಮರಾದ ಎಂಟು ಮಂದಿ. ಇನ್ನು (ವೀರೇಶಃ) ಶತರುದ್ರರಿಗೆ ಕರ್ತೃವಾದ ವೀರೇಶ್ವರ ಮತ್ತು (ಶ್ರೀಕಂಠ) ಗುಣತತ್ತ್ವದಲ್ಲಿದ್ದು ಕೆಳಗಣ ಭುವನಗಳಿಗೆ ಕರ್ತೃವಾದ ಶ್ರೀಕಂಠೇಶ್ವರನೂ ಸೇರಿ (ಶತರುದ್ರಾಃ) ಬ್ರಹ್ಮಾಂಡ

ರಕ್ಷಕರಾದ ಶತರುದ್ರರು. (ಇತಿ) ಹೀಗೆ (ಅಷ್ಟಾದಶಾಭ್ಯಧಿಕಂ ಶತಂ) ನೂರ ಹದಿನೆಂಟು ಮಂದಿ.

ಈ ಸಕಲರಲ್ಲಿ ಪರಿಪಕ್ವಮಲರನ್ನು ಹೇಳುತ್ತಾನೆ.

ಪರಿಪಕ್ವಮಲಾನೇತಾ[1]
ನುತ್ಸಾದನಹೇತು ಶಕ್ತಿಪಾತೇನ ।
ಯೋಜಯತಿ ಪರೇ ತತ್ವೇ
ಸ ದೀಕ್ಷಯಾಽಽಚಾರ್ಯ ಮೂರ್ತಿಸ್ಥಃ ॥೧೫॥

(ಸಃ) ಆ ಶಿವನು (ಪರಿಪಕ್ವಮಲಾನ್) ಬಹು ಪಕ್ವವಾದ ಮಲವುಳ್ಳ (ಏತಾನ್) ಈ ಸಕಲರನ್ನು (ಉತ್ಸಾದನ ಹೇತು ಶಕ್ತಿಪಾತೇನ) ಪಾಶ ಗಳನ್ನು ತೊಲಗಿಸುವುದಕ್ಕೆ ಕಾರಣವಾದ ಅನುಗ್ರಹಶಕ್ತಿಯ ಸಂಪರ್ಕದಿಂದ (ಆಚಾರ್ಯಮೂರ್ತಿಸ್ಥಃ) ಗುರುಮೂರ್ತಿಯನ್ನು ಅಧಿಷ್ಠಿಸಿಕೊಂಡು (ದೀಕ್ಷಯಾ) ದೀಕ್ಷೆಯಿಂದ (ಪರೇ ತತ್ವೇ) ಉತ್ಕೃಷ್ಟವೂ ತನಗೆ ಸಮವೂ ಆದ ಪದವಿಯಲ್ಲಿ (ಯೋಜಯತಿ) ಕೂಡಿಸುತ್ತಾನೆ.

ವಿಚಾರ—ಶಿವನು ಮೂರು ಬಂಧ (ಮಲ) ಗಳಿಂದ ಬದ್ಧರಾದ ಸಕಲ ರಲ್ಲಿ ಚೆನ್ನಾಗಿ ಪರಿಪಕ್ವವಾದ ಮಲವುಳ್ಳವರಲ್ಲಿ ತನ್ನ ತಿರೋಧಾನಶಕ್ತಿಯನ್ನು ಅಡಗಿಸಿ, ಅನುಗ್ರಹಶಕ್ತಿಯಿಂದ ಅವರ ಪಾಶನಿರೋಧ ಮಾಡಿ, ತಾನೇ ಗುರುವಾಗಿ ಅವರಿಗೆ ಶಿವಸಾಮ್ಯರೂಪವಾದ ಉತ್ಕೃಷ್ಟ ಪದವಿಯನ್ನು ಕೊಡುತ್ತಾನೆ. ಮಂದ ಮಲಪಾಕವುಳ್ಳವರನ್ನು ಮಂದತರ ಶಕ್ತಿಪಾತದಿಂದ ವಿದ್ಯೇಶ್ವರ ಮುಂತಾದ ಪದವಿಗಳಲ್ಲಿ ಯೋಜಿಸುತ್ತಾನೆ.

ಶಕ್ತಿಪಾತ—

ಸಮೇ ಕರ್ಮಣಿ ಸಂಜಾತೇ ಕಾಲಾಂತರವಶಾತ್ಪುನಃ ।
ತೀವ್ರಶಕ್ತಿನಿಪಾತೇನ ಗುರುಣಾ ದೀಕ್ಷಿತೋ ಯದಾ ॥
ಸರ್ವಜ್ಞಃ ಸ ಶಿವೋ ಯದ್ವತ್ ಕಿಂಚಿಜ್ಞತ್ವವಿವರ್ಜಿತಃ ।
ಶಿವತ್ವವ್ಯಕ್ತಿಸಂಪೂರ್ಣಃ ಸಂಸಾರೀ ನಪುನಸ್ತದಾ ॥

---

[1] ಮಲಾಯೇತಾನು (ಗ)

ಎಂಬಂತೆ ಪರಮಾತ್ಮನ ಶಕ್ತಿಯು 'ಬಂಧಕರಾ' ಮತ್ತು 'ಮೋಚಿಕಾ' ಎಂದು ಎರಡು ವಿಧ. ಅವುಗಳಲ್ಲಿ ಮೊದಲ ಶಕ್ತಿಯಿಂದ ಶಿವನು ಪಶುಗಳನ್ನು ಬಂಧಿಸುತ್ತಾನೆ. ಪುನಃ ಕಾಲವಶದಿಂದಲೂ ಕರ್ಮವಶದಿಂದಲೂ ಸಮಯವನ್ನು ಕಾಯ್ದು 'ಮೋಚಿಕಾ' ಶಕ್ತಿಯು ಅವನಲ್ಲಿ ಅವತರಿಸುತ್ತದೆ. ಅದೇ 'ಶಕ್ತಿಪಾತ'. ಹೀಗೆ ಶಕ್ತಿಪಾತವಾದ ಮೇಲೆ ಭಗವಂತನು ಅವನಿಗೆ ತಾನೇ ಗುರುವಾಗಿ ಬಂದು ದೀಕ್ಷೆಯೆಸಗಿ ಮಲವನ್ನು ಪಕ್ವಗೊಳಿಸಿ ಮುಕ್ತರನ್ನಾಗಿ ಮಾಡುತ್ತಾನೆ.

ಬಧ್ನಾತಿ ಕಾಚಿದಪಿ:ಶಕ್ತಿರಲುಪ್ತಶಕ್ತೇಃ
ಕ್ಷೇತ್ರಜ್ಞಮಪ್ರತಿಹತಾ ತವ ಪಾಶಜಾಲೈಃ ।
ಜ್ಞಾನಾಸಿನಾ ಚ ವಿನಿಕೃತ್ಯ ಗುಣಾನಶೇಷಾ
ನನ್ಯಾಕರೋತ್ಯಭಿಮುಖಂ ಪುರುಷಂ ವಿಮುಕ್ತೌ ॥ (ಅವಧೂತಪಾದೇ)

ಸಮೇ ಕರ್ಮಣಿ ಸಂಜಾತೇ ಕಾಲಾಂತರವಶಾತ್ತತಃ ।
ಪತತ್ಯುನ್ಮೀಲಿನೀ ಶಕ್ತಿಸ್ತದಾನುಗ್ರಹರೂಪಿಣೀ ॥ (—ಪೌಷ್ಕರೇ)

ತನ್ನಿಪಾತಾಚ್ಚ ತಸ್ಯೈದಮಜ್ಞಸ್ಯಾಪ್ಯಖಿಲಾತ್ಮನಃ ।
ಬುದ್ಧಿರುತ್ಪದ್ಯತೇ ಕಸ್ಮಾದ್ವಿವೇಕೇನಾತ್ಮವರ್ತಿನಾಮ್ ॥
ಯೇಷಾಂ ಶರೀರಿಣಾಂ ಶಕ್ತಿಃ ಪತತ್ಯೇವ ನಿವೃತ್ತಯೇ ।
ತೇಷಾಂ ತಲ್ಲಿಂಗಮೌತ್ಸುಕ್ಯಂ ಮುಕ್ತೌ ದ್ವೇಷೋ ಭವಸ್ಥಿತೌ ॥
ಭಕ್ತಿಶ್ಚಶಿವಭಕ್ತೇಷು ಶ್ರದ್ಧಾ ತಚ್ಛಾಸಕೇ ಶಿವೇ ॥ (ಪೌಷ್ಕರಪಾರಮೇಶ್ವರೇ)

ಏಭಿರ್ಲಕ್ಷೈರವಿಚ್ಛಿನ್ನೈಃ ಶಕ್ತಿಪಾತೋ ಮಹಾತ್ಮಭಿಃ ।
ಅನುಮೇಯಂಃ ಸದೀಕ್ಷೈಶ್ಚ ಶಕ್ತಿಪಾತಾನುಸಾರತಃ ॥
(—ಮೃಗೇಂದ್ರೋತ್ತರೇ)

ಶಕ್ತಿಪಾತವಾಗಿರುವುದನ್ನು ಅವನ ನಡೆನುಡಿಗಳನ್ನು ನೋಡಿ ಗುರು ಗುರ್ತಿಸುತ್ತಾನೆ. ಶಕ್ತಿಪಾತವಾದೊಡನೆಯೇ ಸಾಧಕನಲ್ಲಿ ವಿವೇಕವು ಉದಿಸುತ್ತದೆ. ಮಾನವನನ್ನು ಉದ್ಧರಿಸುವುದಕ್ಕಾಗಿಯೇ ಶಕ್ತಿಪಾತವಾಗುವುದು. ಆಗ ಅವನಲ್ಲಿ ಮುಕ್ತಿಯಲ್ಲಿ ಆಸಕ್ತಿ, ಭವದ ಬಗ್ಗೆ ದ್ವೇಷ, ಶಿವಭಕ್ತರಲ್ಲಿ ಭಕ್ತಿ, ಶಿವಶಾಸ್ತ್ರ ಮತ್ತು ಶಿವನಲ್ಲಿ ಶ್ರದ್ಧೆ ಮುಂತಾದ ಸದ್ಗುಣಗಳು ಕಂಡು ಬರುತ್ತವೆ. ಈ ಗುಣಗಳು ಸ್ಥಿರವಾಗಿ ಸಾಧಕನಲ್ಲಿ ಕಂಡುಬಂದ ಪಕ್ಷದಲ್ಲಿ ಗುರುವು ಅಂಥವನಿಗೆ ಶಿವದೀಕ್ಷೆ ಎಸಗುತ್ತಾನೆ.

ಇತಿ ಶುದ್ಧೇನ ಶಿಷ್ಯೇಣ ಪ್ರಾರ್ಥಿತಃ ಪರಮೋ ಗುರುಃ ।
ಶಕ್ತಿಪಾತಂ ಸಮಾಲೋಕ್ಯ ದೀಕ್ಷಯಾ ಯೋಜಯೇದಮುಮ್ ॥

(ಸಿದ್ಧಾಂತ ಶಿಖಾಮಣಿ ೬.೧೧)

ಹೀಗೆ ಶಕ್ತಿಪಾತದಿಂದ ಪವಿತ್ರಾತ್ಮರಾದವರಲ್ಲಿ ಕೆಲವರನ್ನು ಶಿವನ ವಿದ್ಯೇಶ್ವರಾದಿ ಪದವಿಗಳಲ್ಲಿ ನಿಯಮಿಸುತ್ತಾನೆ.

ರುದ್ರಮಂತ್ರ ಪತೀಶಾನ ಪದಭಾಜೋ ಭವಂತಿ ತೇ ।
ಸ್ಥಿತೌ ಯಾನನುಗೃಹ್ಣಾತಿ ಗುರುಮಾಸ್ಥಾಯ ಚಿದ್ವತಃ ॥
ಯೋ ಯತ್ರಾಭಿಲಷೇದ್ಭೋಗಾನ್ ಸ ತತ್ರೈವ ನಿಯೋಜಿತಃ ।

"ಸಿದ್ಧಿಭಾಙ್ಮಂತ್ರಸಿದ್ಧ್ಯಾದಿ" ಮುಂತಾದ ಉಕ್ತಿಗಳು ಇದನ್ನು ಸಮರ್ಥಿಸುತ್ತವೆ. ಆದ್ದರಿಂದಲೇ ವಿಜ್ಞಾನ ಮತ್ತು ಪ್ರಳಯ ಕಲರಿಗೆ ನಿರಧಿಕರಣವೇ ಶಿವನ ಅನುಗ್ರಹ ಸಿದ್ಧಿ ಎಂದು ಭಾವಿಸಬೇಕು. ಆದುದರಿಂದ ಮಲವು ದ್ರವ್ಯವಾದ್ದರಿಂದ ಅದು ಕಣ್ಣು ಪೊರೆಯಂತೆ ದೀಕ್ಷೆ (ಶಿವಕೃಪೆ) ಯಿಂದ ಕಳೆಯುತ್ತದೆ.

ಅಪಕ್ವಮಲಕರ್ಮವುಳ್ಳ ಜೀವರು ಪುರ್ಯಷ್ಟಕ ದೇಹಯುಕ್ತರಾಗಿ, ಸಮಸ್ತ ಯೋನಿಗಳಲ್ಲಿ ಬರುವರೆಂದು ಹಿಂದೆ ಹೇಳಿದೆ. ಏಕೆಂದರೆ ಶಿವನು ಅವರವರ ಕರ್ಮಫಲಗಳನ್ನು ಭೋಗಿಸಲು ಭುವನಜ ದೇಹಗಳಲ್ಲಿ ಅವರನ್ನು ಕೂಡುವನು ಎಂದು ಹೇಳುತ್ತಾನೆ.

ಬದ್ಧಾನ್ ಶೇಷಾ[1] ನಪರಾ
ನ್ವಿನಿಯುಂಕ್ತೇ ಭೋಗಭುಕ್ತಯೇ ಪುನಃ ।
ತತ್ಕರ್ಮಣಾಮನುಗಮಾ
ದಿತ್ಯೇವಂ ಕೀರ್ತಿತಾಃ ಪಶವಃ ॥೧೬॥

(ಬದ್ಧಾನ್) ಪುರ್ಯಷ್ಟಕವೆಂಬ ಸೂಕ್ಷ್ಮದೇಹದಿಂದ ಬದ್ಧರಾಗಿರುವ (ಶೇಷಾನ್) ಉಳಿದ (ಅಪರಾನ್–ಪುಂಸಃ) ಮತ್ತೆ ಕೆಲವು ಪುರುಷ (ಸಕಲ) ರನ್ನು [ಭೋಗಭುಕ್ತಯೇ] ಭೋಗ [ವಿಷಯ] ವನ್ನು ಅನುಭವಿಸಲು [ತತ್ಕರ್ಮಣಾಂ] ಅವರವರಕರ್ಮಗಳಿಗೆ [ಅನುಗಮಾತ್] ಅನುಗುಣವಾಗಿ ಸ್ಥೂಲ

---

[1] ಶೈ ಷಾನಪರಾನ್ (ಖ)

ದೇಹದಲ್ಲಿ [ವಿನಿಯುಂಕ್ತೇ] ನಿಯೋಜಿಸುತ್ತಾನೆ. [ಇತ್ಯೇವಂ] ಹೀಗೆ [ಪಶವಃ] ಈ ಪಶುಗಳು [ಜೀವರು] [ಕೀರ್ತಿತಾಃ] ಹೇಳಲ್ಪಟ್ಟರು. ಎಂದು ಪಶುಪದಾರ್ಥವನ್ನು ಉಪಸಂಹರಿಸುತ್ತಾನೆ.

ಇನ್ನು ಪಾಶಪದಾರ್ಥ ಭೇದವನ್ನು ಹೇಳುತ್ತಾನೆ.

ಪಾಶಾಶ್ಚತುರ್ವಿಧಾಃ ಸ್ಯುಃ
ಪುಂಸೋ ಮಲಕರ್ಮಜೌ ಮತೌ ಪ್ರಥಮೌ[1] ।
ಮಾಯೇಯ[2] ತಿರೋಧಾಯಕ
ಶಿವಶಕ್ತಿಸಮುದ್ಭವೌ ಚಾನ್ಯೌ ॥೧೭॥

[ಪುಂಸಃ] ಪುರುಷ [ಪಶು] ನಿಗೆ ಬಂಧಕವಾದ [ಪಾಶಾಃ] ಪಾಶಗಳು [ಚತುರ್ವಿಧಾಃ ಸ್ಯುಃ] ನಾಲ್ಕುವಿಧವಾಗಿವೆ. ಅವು ಯಾವುವೆಂದರೆ [ಮಲಕರ್ಮಜೌ] ಮಲ ಮತ್ತು ಕರ್ಮಗಳಿಂದ ಹುಟ್ಟಿದವು. [ಪ್ರಥಮೌಮತೌ] ಇವು ಅನಾದಿಸಿದ್ಧಗಳು. 'ಮಲಕರ್ಮಸಂಜ್ಞಕೌ' ಎಂಬ ಪಾಠದಲ್ಲಿ 'ಮಲಕರ್ಮ' ಎಂಬ ಹೆಸರಿನ ಎಂದು ಅರ್ಥ. [ಚ] ಮತ್ತು [ಮಾಯೇಯ ತಿರೋಧಾಯಕ ಶಿವಶಕ್ತಿಸಮುದ್ಭವೌ] ಮಾಯೆಯಿಂದ ಹುಟ್ಟಿದ ಕಲಾದಿಗಳು ಮತ್ತು ತಿರೋಧಾಯಕವಾದ ಶಿವನ ಶಕ್ತಿಯೂ [ಅನ್ಯೌ] ಬೇರೆಯಾಗಿವೆ.

ಸಂದೇಹ—ಹಿಂದೆ ಅರ್ಥಪಂಚಕವನ್ನು ಪಾಶವೆಂದು ಹೇಳಲಾಯಿತು. ಇಲ್ಲಿ ಪಾಶಗಳು ನಾಲ್ಕು ಎಂದು ಹೇಳಿದುದು ಅದಕ್ಕೆ ವಿರೋಧವಾಗಲಿಲ್ಲವೆ?

ಸಮಾಧಾನ—ಆಗುವುದಿಲ್ಲ. ಏಕೆಂದರೆ ಮಹಾಮಾಯೆಯೆನಿಸಿದ ಬಿಂದುವು ಪರಮುಕ್ತಿಯ ಅಪೇಕ್ಷೆಯಿಂದ ಪಾಶವೆನಿಸಿದ್ದರೂ ಆ ಪಾಶಯೋಗವು ವಿದ್ಯೇಶ್ವರಮುಂತಾದ ಪದಪ್ರಾಪ್ತಿಗೆ ಕಾರಣವಾಗುವುದರಿಂದ ಅದು ಅಪರ ಮುಕ್ತಿಯೆನಿಸಿದೆ. ಆದ್ದರಿಂದ ಅದು ಪಾಶವೆನಿಸುವುದಿಲ್ಲ. ಪುಂಸ್ತ್ವಮಲ ಯೋಗವುಳ್ಳ ಸಕಲನಿಗೆ ಅಂದರೆ ಶುದ್ಧಾಧ್ವದಲ್ಲಿರುವ ಅನಂತಾದಿಗಳಿಗೆ ಮಹಾಮಾಯಾರೋಧಕ ಶಕ್ತಿರೂಪವಾದ ಎರಡು ಪಾಶಗಳುಂಟು. ಆದರೆ ಅವು ಮಾಯಾದಿಗಳಂತೆ ಮೋಹಕವಲ್ಲ, ಬೋಧಕಗಳು.

---

1 ಮಲಕರ್ಮಸಂಜ್ಞಕೌ (ಗ) 2 ಮಾಯೀಯಾ (ಗ)

ಸಂದೇಹ—"ಯನ್ಮಾದಾಖ್ಯಂ ಪರಂ ಬೀಜಂ ಸರ್ವಭೂತೇಷ್ವವಸ್ಥಿತಮ್" ಎಂಬ ಶ್ರುತಿಯಂತೆ ಸಕಲನಿಗೂ ಬಿಂದು ಕಾರ್ಯಯೋಗವುಂಟಲ್ಲವೆ ?

ಸಮಾಧಾನ—ನಿಜ-ಆದರೆ ಸರ್ವಜ್ಞತ್ವಾದಿಗಳಿಂದ ಕೂಡಿರುವ ಬೈಂದವ ಶರೀರವು ಮಾತ್ರ ಅವನಿಗೆ ಇಲ್ಲವೆಂದು ತಿಳಿಯಬೇಕು. ಅವು ಯಾವುವೆಂದರೆ 'ಮಲಕರ್ಮಜೌ ಮತೌಪ್ರಥಮೌ'–ಮಲಕರ್ಮಜೌ ಎಂದರೆ ಔಪಚಾರಿಕವಾಗಿ ಕಾರ್ಯಕಾರಣಗಳಿಗೆ ಅಭೇದವಿರುವುದರಿಂದ ಮಲಕರ್ಮರೂಪವಾದವು ಎಂದು ಅರ್ಥ. ಮುಂದಿನ ಸೂತ್ರದಲ್ಲಿ ಅವುಗಳಲಕ್ಷಣವನ್ನು ಹೇಳಲಾಗುತ್ತದೆ. ಆಯಾ ಕಾರ್ಯಕಾರಣಗಳಿಗೆ ಆವರಣಭೋಗ ಮತ್ತು ಭೋಜನಗಳಿಗೆ ಫಲರೂಪವಾಗಿ ಪಾಶವೆಂದು ಹೇಳಿದೆ.

ಇಲ್ಲಿ ಮಲ ಎಂದರೆ ಅಜ್ಞಾನ. ಶಿವಸೂತ್ರದಲ್ಲಿ 'ಜ್ಞಾನಂ ಬಂಧಃ" ಎಂದು ಹೇಳಿದೆ. ಎಂದರೆ ಅವಿದ್ಯಾಸಂಸ್ಕಾರರೂಪವಾದುದೇ ಮಲವೆಂದು ತಾತ್ಪರ್ಯ. ಆದ್ದರಿಂದಲೇ ಶಿವಸೂತ್ರವಾರ್ತಿಕದಲ್ಲಿ 'ಅಹಂಮಮೇದಮಿತಿಯದ್‌ಜ್ಞಾನಂ ಭೇದಪ್ರಥಾತ್ಮಕಂ। ಶಬ್ದಾನುವೇಧತೋಜಾತಂ ಮಾಯೀಯಂ ಮಲಕಾರಣಮ್" ಎಂದು ಕಿರಣಾಗಮದಲ್ಲಿ—

ಮಲೋ ಜ್ಞಾನಂ ಪಶುತ್ವಂ ಚ ತಿರಸ್ಕಾರ ಕರಸ್ತಥಾ ।
ಅವಿದ್ಯಾಹ್ಯಾಕೃತಿರ್ಮೂರ್ಛಾ ಪರ್ಯಾಯಾಸ್ತಸ್ಯವಾಚಕಾಃ ॥

ಎಂದು ಹೇಳಿದೆ.

ಈ ಮಲವು ಅನಾದಿಜ್ಞಾನಕ್ರಿಯಾವಾರಕವಾದದ್ದು. ಕರ್ಮವು "ಪ್ರವಾಹಾನಾದಿ ಬೀಜಾಂಕುರ" ನ್ಯಾಯದಿಂದ ಕರ್ಮಜ ಶರೀರಸಂತಾನಕ್ಕೂ ಸಹ ಅನಾದಿತ್ವಸಿದ್ಧವಾಗಿದೆ. ಮಾಯೀಯ ಮಲವು ಕಲಾದಿಯಾದ್ದರಿಂದ ಅದು ಆಗಂತುಕವಾದ ಪಾಶವು, ಕರ್ಮವಿದ್ದರೆ ಮಾತ್ರ ಅದು ಇರುತ್ತೆ. ಅಭಿಪ್ರಾಯವಿಷ್ಟು : ಮೊದಲು ಐದು ಪಾಶಗಳೆಂದು ಹೇಳಿ ಈಗ ನಾಲ್ಕು ಪಾಶಗಳು ಎಂದು ಹೇಳುವುದಕ್ಕೆ ಕಾರಣವೇನೆಂದರೆ ವಿಜ್ಞಾನಾಕಲರ ವಿಷಯವಾದ ಬಿಂದುವೆಂಬ ಪಾಶವನ್ನು ಮುಂದೆ ಹೇಳುವುದರಿಂದ, ಇಲ್ಲಿ ಸಕಲತ ವಿಷಯವಾಗಿ ನಾಲ್ಕು ಪಾಶಗಳನ್ನು ಮಾತ್ರ ಹೇಳಿದೆಯೆಂದು ತಿಳಿಯಬೇಕು.

ಆ ನಾಲ್ಕು ಪಾಶಗಳಲ್ಲಿ ಮೊದಲು ಮಲದ ಲಕ್ಷಣವನ್ನು ಹೇಳುತ್ತಾನೆ.

ಏಕೋ ಹ್ಯನೇಕ ಶಕ್ತಿ
ರ್ದೃಕ್ಕ್ರಿಯಯೋಶ್ಛಾದಕೋ ಮಲಃ ಪುಂಸಃ* ।
ತುಷ ಕಂಬುಕವತ್ ಜ್ಞೇಯಃ
ತಾಮ್ರಾಶ್ರಿತ ಕಾಲಿಮಾ ವದ್ವಾ ।।೧೮।।

[ಮಲಃ] ಮಲವು [ಏಕಃ] ಒಂದು ಎಂದು [ಹಿ] ಪ್ರಸಿದ್ಧವು. ಅದು [ಅನೇಕ ಶಕ್ತಿಃ] ಅನೇಕ ಆತ್ಮರನ್ನು ಆವರಿಸುವ ಅನಂತಶಕ್ತಿಯುಳ್ಳದ್ದು, [ಪುಂಸಃ] ಪುರುಷನ [ದೃಕ್ಕ್ರಿಯಯೋಃ] ಜ್ಞಾನಕ್ರಿಯೆಗಳಿಗೆ [ಛಾದಕಃ] ರೋಧಕವಾಗಿದೆ. [ತುಷಕಂಬುವತ್] ಹೊಟ್ಟು, ತವುಡು ಹೇಗೆ ಅಂಕುರೋತ್ಪತ್ತಿಗೆ ಕಾರಣವೋ ಹಾಗೆ ದೇಹೋತ್ಪತ್ತಿಗೆ ಮಲವು ಕಾರಣವಾಗಿದೆಯೆಂದು [ಜ್ಞೇಯಃ] ತಿಳಿಯಬೇಕು. [ತಾಮ್ರಾಶ್ರಿತ ಕಾಳಿಕಾವದ್ವಾ] ತಾಮ್ರದ ಕಾಳಿಕೆಯು [ಕಿಲುಬು] ಹೇಗೆ ರಸಸಿದ್ಧಿಯಿಂದ ತೊಲಗುವುದೊ ಹಾಗೆ ಶಿವಶಕ್ತಿಯಿಂದ ತೊಲಗಿಸಲ್ಪಡುವುದೆಂದು [ಜ್ಞೇಯಃ] ಅರಿಯತಕ್ಕದ್ದು. ಹೀಗಲ್ಲದೆ ಮಲವು ಆತ್ಮನಲ್ಲಿ ಹೊಟ್ಟಿನಂತೆ, ತಾಮ್ರದಲ್ಲಿನ ಕಾಳಿಕೆಯಂತೆ ಬೆರೆತಿರುವುದಿಲ್ಲ.

ವಿಚಾರ :—ಯದ್ಯಪಿ ಮಲವು ಒಂದು. ಹಾಗೆ ಹೇಳಿದ ಪಕ್ಷದಲ್ಲಿ ಒಬ್ಬನಿಗೆ ಮೋಕ್ಷವಾಗುವಲ್ಲಿ ಅದು ತಡೆಯಲ್ಪಡುತ್ತದೆ. ಆಗ ಉಳಿದವರೆಲ್ಲರಿಗೂ ಮೋಕ್ಷವೆಂದು ಹೇಳಬೇಕಾದೀತು ! ಅದಕ್ಕಾಗಿ "ಅನೇಕ ಶಕ್ತಿ" ಎಂದು ಹೇಳಲಾಯಿತು. ಆದ್ದರಿಂದ ಅದು ಅನೇಕ ಆತ್ಮರಿಗೆ ಆವರಕವಾದ ಅನೇಕಶಕ್ತಿಯುಳ್ಳದ್ದು. ಹೀಗೆ ಹೇಳಿದ್ದರಿಂದ ಒಂದು ಶಕ್ತಿಯು ಪರಿಪಕ್ವವಾದರೆ ಅದು ಆವರಿಸಿದ್ದ ಆತ್ಮನಿಗೆ ಮಾತ್ರವೇ ಮೋಕ್ಷ. ಉಳಿದವರಿಗೆ ಇಲ್ಲವೆಂದು ತಾತ್ಪರ್ಯ. ಉದಾಹರಣೆಗಾಗಿ, ತಂಡುಲವನ್ನು ಮುಚ್ಚಿರುವ ಹೊಟ್ಟು ಕುಟ್ಟುವುದರಿಂದಲೂ ಮತ್ತು ತಾಮ್ರವನ್ನು ಮರೆಮಾಡಿರುವ ಕಿಲುಬು ರಸವೇಧದಿಂದಲೂ ಬಿಡುಗಡೆಯಾಗುತ್ತವೆ. ಅದರಂತೆ ಆತ್ಮನಿಗೆ

---

* ಪುಂಸಾಂ (ಗ)

ಆವರಿಸಿರುವ ಮಲವೂ ಕೂಡ ಅನಾದಿ. ಅದು ದೀಕ್ಷೆಯಿಂದ ಬಿಡುಗಡೆಯಾಗುತ್ತದೆ. ಹೊಟ್ಟು ಭತ್ತವು ಮೊಳೆಯುವುದಕ್ಕೆ ಕಾರಣವಾಗುವಂತೆ ಮಲವು ಆತ್ಮನ ಪುನರ್ಜನ್ಮಾದಿಗಳಿಗೆ ಕಾರಣವಾಗುತ್ತದೆ. ಕಿಲುಬು ತಾಮ್ರಕ್ಕೆ ಅನಾದಿಯಾದರೂ ಅದು ರಸಸಿದ್ಧಿಯಿಂದ ದೂರವಾಗುತ್ತದೆ. ಅದರಂತೆ ಶಿವಶಕ್ತಿಯಿಂದ ಮಲವು ನಷ್ಟವಾಗುತ್ತದೆ.

ಇನ್ನು ಉಳಿದ ಕರ್ಮ ಮತ್ತು ಮಾಯೆಗಳಿಗೆ ಲಕ್ಷಣವನ್ನು ಹೇಳುತ್ತಾನೆ.

ಕರ್ಮಾನಾದಿಪ್ರೋಕ್ತಂ
ಧರ್ಮಾಧರ್ಮಾತ್ಮಕಂ ವಿಚಿತ್ರಂ ಚ ।
ಮಾಯಾ ಚ ವಸ್ತುರೂಪಾ
ಮೂಲಂ ವಿಶ್ವಸ್ಯ ನಿತ್ಯಾ ಸಾ ॥೧೯॥

(ಕರ್ಮ) ಕರ್ಮವು (ಅನಾದಿ) ಬೀಜವೃಕ್ಷನ್ಯಾಯ, ಪ್ರವಾಹನ್ಯಾಯದಂತೆ ಅನಾದಿಯೆಂದು (ಪ್ರೋಕ್ತಂ) ಹೇಳಲ್ಪಟ್ಟಿತು. ಅದು (ಧರ್ಮಾಧರ್ಮಾತ್ಮಕಂ) ಪುಣ್ಯಪಾಪರೂಪವಾಗಿರುವುದು. [ವಿಚಿತ್ರಂಚ] ನಾನಾಪ್ರಕಾರವಾಗಿರುವುದು. ಇನ್ನು (ಮಾಯಾ ಚ) ಮಾಯೆಯೂ ಸಹ (ವಸ್ತುರೂಪಾ) ಸತ್ಯವಾದುದು. ಆದರೆ ಅದು ಅದ್ವೈತ ವೇದಾಂತಿಗಳು ಹೇಳುವಹಾಗೆ ಮಿಥ್ಯೆಯಲ್ಲ. (ವಿಶ್ವಸ್ಯ) ಸಮಸ್ತ ಕಲಾದಿಗಳಿಗೆ (ಮೂಲಂ) ಉಪಾದಾನ ಕಾರಣವಾಗಿದೆ. (ಸಾ) ಆ ಮಾಯೆಯು (ನಿತ್ಯಾ) ಶಾಶ್ವತವಾದುದು.

ವಿಚಾರ:—ಇಲ್ಲಿ ಹೇಳಿರುವ ವೈಚಿತ್ರ್ಯವು ಸಾಧನಭೇದದಿಂದ; ಸಾಧನವೂ ಕೂಡ ಕರ್ತೃ ಮೊದಲಾದ ವಿಶೇಷದಿಂದ ಮತ್ತು ವಿಚಿತ್ರ ಭೋಗಾತ್ಮಕ ಫಲಭೇದವಿರುವುದರಿಂದಲೂ ಸಹ ಸಿದ್ಧವಾಗುತ್ತದೆ. ವಿಶ್ವವೆಂಬುದು ಸಮಸ್ತ ಕಲಾತ್ಮಕವಾದ ಸಾಧಾರಣಕ್ಕೂ, ಭುವನ ಮೊದಲಾದ ಅಸಾಧಾರಣಕ್ಕೂ, ಸೂಕ್ಷ್ಮದೇಹರೂಪವಾದ ಉಭಯರೂಪಕ್ಕೂ, ಭುವನಜ ಶರೀರಾತ್ಮಕ ಸಮಸ್ತ ಜಗತ್ತಿಗೂ ಮೂಲ. ಎಂದರೆ ಉಪಾದಾನವೆಂದು ತಾತ್ಪರ್ಯ. ಆ ಮಾಯೆಯು ಪರಮಕಾರಣ; ಆದ್ದರಿಂದ ಅದು ನಿತ್ಯ. ಅನಿತ್ಯವೆಂದರೆ ಅನವಸ್ಥಾದೋಷ. ಆದ್ದರಿಂದ ಅದು ಒಂದು. ಈ ನ್ಯಾಯವು

ಶುದ್ಧಾಧ್ವಕ್ಕೆ ಉಪಾದಾನವಾದ ಬಿಂದುವಿಗೂ ಅನ್ವಯಿಸುತ್ತದೆ.

ಸಂದೇಹ:—ಹಿಂದೆ ಉದ್ದೇಶವನ್ನು ನಿರೂಪಿಸಿದ ಸೂತ್ರದಲ್ಲಿ 'ಮಾಯೀಯಃ" ಎಂದು ಮಾಯೆಗೆ ಪಾಶತ್ವವನ್ನು ಹೇಳಿದಿರಿ; ಇಲ್ಲಿ ಮಾಯೆಗೆ ಬೇರೆ ಲಕ್ಷಣ ಹೇಳಿದಂತಾಯಿತಲ್ಲವೆ ?

ಸಮಾಧಾನ:—ನಿಜ; ಮಾಯೆ ಸ್ವತಃ ಬಂಧಕವಲ್ಲವಾದ್ದರಿಂದ ಅಲ್ಲಿ ಮಾಯೆಯ ಕಾರ್ಯವನ್ನು ಪಾಶವೆಂದು ಹೇಳಲಾಯಿತು. ಇಲ್ಲಿ ಅದು ಕಾರಣಕ್ಕೆ ಅಧೀನವಾದ್ದರಿಂದ ಆ ಕಾರಣಕ್ಕೆ ಲಕ್ಷಣವನ್ನು ಹೇಳಿದೆವು.

ಸಂದೇಹ:—ಪರಮೇಶ್ವರನು ವಿಶ್ವದ ಮೂಲ. ಆದ್ದರಿಂದ ಮಾಯೆ ವಿಶ್ವಮೂಲವಲ್ಲ.

ಸಮಾಧಾನ:—ಅವಿನಾಭಾವ ಸಂಬಂಧದಿಂದ ಒಂದಾಗಿರುವ ಮಾಯೆ ಮತ್ತು ಪರಮೇಶ್ವರರಿಬ್ಬರೂ ವಿಶ್ವದ ಮೂಲ. ಪರಮೇಶ್ವರಾಧಿಷ್ಠಾನವಿಲ್ಲದ ಜಡಮಾಯೆ ಜಗತ್ತಿಗೆ ಉಪಾದಾನವಾಗಲಾರದು. ಪರಮೇಶ್ವರನು ಚೇತನನಾದರೂ ಮಾಯೆಯನ್ನು ಬಿಟ್ಟು ವಿಶ್ವದ ಮೂಲವಾಗಲಾರ. ಏಕೆಂದರೆ ಅವನು ನಿರ್ವ್ಯಾಪಾರ ಮತ್ತು ಉದಾಶೀನ. ಪರಸ್ಪರ ಸಂಸ್ಪೃಷ್ಟರಾದ ಅವರಿಬ್ಬರೂ ಜಗತ್ತಿಗೆ ಮೂಲ. ಕಬ್ಬಿಣದ-ತುಂಡು ಮತ್ತು ಬೆಂಕಿಗಳಂತೆ ಅವರು ಕಾರ್ಯ–ಕಾರಣರು. 'ಮಾಯಾಚ' ಎಂಬಲ್ಲಿ "ಚ" ಕಾರವು ಮಾಯಾಕಾರ್ಯವಾದ ವಿಶ್ವಕ್ಕೆ ವಸ್ತುರೂಪತ್ವವನ್ನು ಹೇಳಿದೆ. ಕಾರ್ಯವು ವಿಸ್ತೃತವಾದ್ದರಿಂದ ಆದಕ್ಕೆ ಮುಂದೆ ಲಕ್ಷಣವನ್ನು ಹೇಳಲಾಗುತ್ತದೆ.

ಹೀಗೆ ಮುಖ್ಯವಾದ ಪಾಶತ್ರಯವನ್ನು ಹೇಳಿ, ಶಕ್ತಿಗೆ ಉಪಚಾರದಿಂದ ಪಾಶತ್ವವನ್ನು ಹೇಳುತ್ತಾನೆ.

ಪಾಶಾನುಗ್ರಾಹಿತ್ವಾತ್
ಪುರುಷತಿರೋಧಾಯಿಕಾ ವಿಭೋಶ್ಶಕ್ತಿಃ ।
ಪಾಶತ್ವೇನಾಭಿಹಿತಾ
ಕಥಿತಾಃ ಪಾಶಾಶ್ಚತುರ್ವಿಧಾ ಸ್ತ್ವೇವಮ್ ॥೨೦॥

(ಪುರುಷ ತಿರೋಧಾಯಿಕಾಃ) ಪುರುಷನಿಗೆ ಭೋಗವನ್ನುಂಟುಮಾಡುವ

(ವಿಭೋಃ) ಪರಮೇಶ್ವರನ (ಶಕ್ತಿಃ) ಶಕ್ತಿಯು (ಪಾಶಾನುಗ್ರಾಹಿತ್ವಾತ್) ಪಾಶಗಳನ್ನು ಅನುಗ್ರಹಿಸುವುದರಿಂದ (ಪಾಶತ್ವೇನ) ಪಾಶವೆಂದು (ಅಭಿಹಿತಾ) ಹೇಳಲ್ಪಟ್ಟಿತು. (ಚತುರ್ವಿಧಾಃ) ನಾಲ್ಕುವಿಧವಾದ (ಪಾಶಾಸ್ತು) ಪಾಶಗಳಾದರೊ (ಏವಂ) ಹೀಗೆ (ಕಥಿತಾಃ) ಹೇಳಲ್ಪಟ್ಟವು.

ತತ್ತ್ವಪ್ರಕಾಶದಲ್ಲಿ ಪತಿ–ಪಶು–ಪಾಶವಿಚಾರವುಳ್ಳ ಪ್ರಥಮಪರಿಚ್ಛೇದವು ಮುಗಿದುದುಃ

---

# ದ್ವಿತೀಯ ಪರಿಚ್ಛೇದ

ಹೀಗೆ ಸಕಲರ ವಿಷಯವಾದ ಪಾಶ (ಕಾರಣ) ತ್ರಯ ಮತ್ತು ತಿರೋಧಾನ ಶಕ್ತಿಯನ್ನು ಹೇಳಿ, ಮಾಯೆಯನ್ನು ಮೀರಿದ ವಿಜ್ಞಾನಕಲರ ವಿಷಯವೆನಿಸಿದ ಶುದ್ಧಾಧ್ವ ರೂಪ ಬಿಂದು ವೆಂಬ ಪಾಶವನ್ನು ಹೇಳುತ್ತಾನೆ.

ಶುದ್ಧಾನಿ ಪಂಚತತ್ತ್ವಾ-
ನ್ಯಾದ್ಯಂತೇಷು ಸ್ಮರಂತಿ ಶಿವತತ್ತ್ವಮ್ ।
ಶಕ್ತಿಸದಾಶಿವತತ್ತ್ವೇ
ಈಶ್ವರ ವಿದ್ಯಾಖ್ಯ ತತ್ತ್ವೇ ಚ ॥೧॥ (೨೧)

(ಶುದ್ಧಾನಿ) ಶುದ್ಧವಾಗಿರುವ (ತತ್ತ್ವಾನಿ) ತತ್ತ್ವಗಳು (ಪಂಚ) ಐದು. (ತೇಷು) ಅವುಗಳಲ್ಲಿ (ಶಿವತತ್ತ್ವಂ) ಶಿವತತ್ತ್ವವೆಂಬ ಬಿಂದುವು (ಆದ್ಯಂ) ಉಪಾದಾನವಾಗಿದೆಯೆಂದು (ಸ್ಮರಂತಿ) ಹೇಳುತ್ತಾರೆ. ಆದರ ಕಾರ್ಯವಾದ ತತ್ತ್ವಗಳು ಯಾವುವು ಎಂದರೆ (ಶಕ್ತಿಸದಾಶಿವತತ್ತ್ವೇ) ಶಕ್ತಿತತ್ತ್ವ ಮತ್ತು ಸದಾಶಿವತತ್ತ್ವಗಳು; ಹಾಗೂ (ಈಶ್ವರವಿದ್ಯಾಖ್ಯತತ್ತ್ವೇ ಚ) ಈಶ್ವರ ಮತ್ತು ಸದಾಶಿವತತ್ತ್ವಗಳು.

ವಿಚಾರ:—ಮುಂದಿನ ಮೂರು ಕಾರಿಕೆಗಳಲ್ಲಿ ಶಿವತತ್ತ್ವ ಮೊದಲು ಪೃಥಿವಿವರೆಗಿನ ಮುವತ್ತಾರು ತತ್ತ್ವಗಳು ಉಕ್ತವಾಗಿವೆ. ಇವುಗಳಲ್ಲಿ ಮೊದಲ ಐದು ತತ್ತ್ವಗಳು ಶಿವಸ್ವರೂಪ. ಆದ್ದರಿಂದ ಅವು ಶುದ್ಧ. ಮುಂದಿನ ಏಳು

ತತ್ತ್ವಗಳು ಪಶುರೂಪವಾದ್ದರಿಂದ ಶುದ್ಧಾಶುದ್ಧ. ಕಡೆಯವು ಕೇವಲ ಅಶುದ್ಧ. ಅವ್ಯಕ್ತವು ಮಾಯೆಯಿಂದ ಹುಟ್ಟಿತು. ಅವ್ಯಕ್ತರಿಂದ ಗುಣತತ್ತ್ವ, ಅದರಿಂದ ಬುದ್ಧಿ, ಬುದ್ಧಿಯಿಂದ ಅಹಂಕಾರ, ಅಹಂಕಾರದಿಂದ ಮನಸ್ಸು ಜ್ಞಾನೇಂದ್ರಿಯ, ಕರ್ಮೇಂದ್ರಿಯ, ತನ್ಮಾತ್ರಗಳೂ ಅವುಗಳಿಂದ ಆಕಾಶಾದಿ ಪಂಚಭೂತಗಳೂ ಹುಟ್ಟಿದವು.

ಶಿವತತ್ತ್ವವು ಬಿಂದುರೂಪ; ಮತ್ತು ಅದು ಮುಖ್ಯ ಉಪಾದಾನವೆಂದು ಹೇಳಲಾಗಿದೆ. ಪರಮೋಪಾದಾನವಾದ್ದರಿಂದಲೇ ಇದು ಮಾಯೆಯಂತೆ ನಿತ್ಯ. ಶಕ್ತಿ ಮೊದಲಾದ ನಾಲ್ಕು ತತ್ತ್ವಗಳು ಅದರ ಕಾರ್ಯಗಳು: ಆದ್ದರಿಂದಲೇ ಅದು 'ಮಾಯೋಪರಿ ಮಹಾಮಾಯಾ' ಎಂದು ಹೇಳಲ್ಪಟ್ಟಿದೆ. ವಿದ್ಯಾ ಮೊದಲಾದ ತತ್ತ್ವಗಳು ವಿಚಿತ್ರ ಭುವನಾದಿ ಸನ್ನಿವೇಶಗಳಿಂದ ಕೂಡಿದವು; ಮತ್ತು ಶ್ರುತಿರೂಪ ಕಾರ್ಯವು ಸಿದ್ಧಿಸಿದ್ದರಿಂದಲೂ, ಅದಕ್ಕೆ ಶರೀರಾದಿ ಯೋಗವು ಸಂಭವಿಸಿದ್ದರಿಂದಲೂ ಅದಕ್ಕೆ ಕಾರಣವಾದ ಬಿಂದು (ಶಿವತತ್ತ್ವ) ವಿಗೆ ಮಹಾಮಾಯಾತ್ಮಕತ್ವವು ಸಿದ್ಧವಾಯಿತು. ಮೇಲಾಗಿ ನಾದ ಮೊದಲಾದವುಗಳ ಮೂಲಕ ಮಂತ್ರ ತಂತ್ರ ಮೊದಲಾದುವನ್ನು ಉತ್ಪಾದಿಸುವುದೂ ಈ ಬಿಂದುವಿಗೇ ಹೇಳಿದೆ. "ಶಕ್ತೇರ್ನಾದೋ ಭವೇದ್ಬಿಂದುರಕ್ಷರಂ ಮಾತೃಕಾ ತತಃ" ಮುಂತಾದ ಪ್ರಮಾಣಗಳು ಇದನ್ನು ಹೇಳುತ್ತವೆ. ಹೀಗೆ ಬಿಂದು ರೂಪವಾದ ಶಿವತತ್ತ್ವವನ್ನು ಹೇಳಿ ಅದಕ್ಕೆ ಕಾರ್ಯವಾದ ನಾಲ್ಕು ತತ್ತ್ವಗಳನ್ನು "ಶಕ್ತಿ ಸದಾಶಿವ" ಮುಂತಾಗಿ ಹೇಳಿದ್ದಾನೆ.

ಹಿಂದೆ ಹೇಳಿದಂತೆ ಶುದ್ಧತತ್ತ್ವಗಳನ್ನು ಸಂಖ್ಯೆಯಿಂದಲೂ, ಹೆಸರಿನಿಂದಲೂ ಹೇಳಿ ಅಶುದ್ಧತತ್ತ್ವಗಳನ್ನು ಹೇಳುತ್ತಾನೆ.

ಪುಂಸೋಽಜ್ಞಕರ್ತೃತಾರ್ಥಂ[1]
ಮಾಯಾ ತಸ್ತತ್ತ್ವ ಪಂಚಕಂ ಭವತಿ ।
ಕಾಲೋ ನಿಯತಿಶ್ಚ ತಥಾ
ಕಲಾ ಚ ವಿದ್ಯಾ ಚ ರಾಗಶ್ಚ ॥೨॥ (೨೨)

---

[1] ಜ್ಞಕರ್ತೃತಾರ್ಥಂ (ಖ)

(ಪುಂಸಃ) ಬದ್ಧಾತ್ಮನ (ಜ್ಞಕರ್ತೃತಾರ್ಥಂ) ಜ್ಞಾನ ಮತ್ತು ಕರ್ತೃತ್ವ ಸಿದ್ಧಿಗೋಸ್ಕರ (ಮಾಯಾತಃ) ಮಾಯೆಯ ದೆಶೆಯಿಂದ ಅಂದರೆ ಸಾಕ್ಷಾತ್ತಾಗಿ ಮತ್ತು ಪರಂಪರೆಯಿಂದ (ತತ್ತ್ವಪಂಚಕಂ) ಐದು ತತ್ತ್ವಗಳು (ಭವಂತಿ) ಆಗುತ್ತವೆ. ಅವು ಯಾವುವೆಂದರೆ (ಕಾಲಃ) ಕಾಲ (ನಿಯತಿಶ್ಚ ನಿಯತಿ) (ತಥಾ) ಹಾಗೆಯೇ (ಕಲಾ ಚ) ಕಲೆ (ವಿದ್ಯಾ ಚ) ವಿದ್ಯೆ ಮತ್ತು (ರಾಗಶ್ಚ) ರಾಗ ಎಂಬವು.

ಸಂದೇಹ:—ಇಲ್ಲಿ ಶುದ್ಧಾಶುದ್ಧ ತತ್ತ್ವಗಳು ಏಳು ಎಂಬುದು ಹೇಗೆ ?

ಸಮಾಧಾನ:—ಪುರುಷನಿಗೆ ಜ್ಞಾನ ಮತ್ತು ಕರ್ತೃತ್ವಸಿದ್ಧಿಸಲು ಮಾಯೆಯಿಂದ ಐದು ತತ್ತ್ವಗಳು ಹುಟ್ಟಿದವು. ಆದ್ದರಿಂದ ಮಾಯೆ ಕಾರಣ ಕಾರ್ಯತತ್ತ್ವಪಂಚಕ. ಅವುಗಳಿಂದ ಕೂಡಿದ ಪುರುಷ ಏಳನೆಯವನು. ತತ್ತ್ವರಹಸ್ಯದಲ್ಲಿ ಹೀಗೆ ಉಲ್ಲೇಖಿಸಿದೆ. "ಮಾಯಾ ಕಾಲೋ ನಿಯತಿಃ ಕಲಾ ಚ ವಿದ್ಯಾಭಿಲಾಷ ಕೃತ್ಪುರುಷಃ। ಕ್ಲೃಪ್ತಾನಿ ಸಪ್ತಧೈವಂ ಶುದ್ಧಾಶುದ್ಧಾನಿ ತತ್ತ್ವಾನಿ॥"

ಅವ್ಯಕ್ತಂ ಮಾಯಾತೋ
ಗುಣತತ್ತ್ವಂ ತದನು ಬುದ್ಧ್ಯಹಂಕಾರೌ ।
ಚೇತೋ ಧೀ ಕರ್ಮೇಂದ್ರಿಯ-
ತನ್ಮಾತ್ರಾಣ್ಯನು ಚ ಪಂಚಭೂತಾನಿ ॥೩॥ [೨೩]

(ಮಾಯಾತಃ) ಮಾಯೆಯ ದೆಶೆಯಿಂದ ಅಂದರೆ ಪರಂಪರೆಯಿಂದ (ಅವ್ಯಕ್ತಂ) ಪ್ರಕೃತಿತತ್ತ್ವ (ಗುಣತತ್ತ್ವಂ) ಗುಣತತ್ತ್ವ (ತದನು) ಬಳಿಕ ಆ ಗುಣತತ್ತ್ವದಿಂದ (ಬುದ್ಧ್ಯಹಂಕಾರೌ) ಬುದ್ಧಿತತ್ತ್ವ ಅಹಂಕಾರತತ್ತ್ವಗಳು (ಚೇತಃ) ಮನಸ್ತತ್ತ್ವಗಳು (ಧೀಕರ್ಮೇಂದ್ರಿಯ ತನ್ಮಾತ್ರಾಣಿ) ಜ್ಞಾನೇಂದ್ರಿಯ, ಕರ್ಮೇಂದ್ರಿಯ, ತನ್ಮಾತ್ರಗಳು, (ಅನುಚ) ತರುವಾಯ [ಪಂಚಭೂತಾನಿ] ಐದು ಭೂತಗಳೂ [ಭವಂತಿ] ಆಗುತ್ತವೆ.

ಪರಶಿವನು ಈ ಎಲ್ಲತತ್ತ್ವಗಳನ್ನೂ ಏಕೆ ಸೃಷ್ಟಿಸಿದನು ಎಂಬುದನ್ನು ಹೇಳುತ್ತಾನೆ.

ಪುರುಷಸ್ಯ ಭೋಗಹೇತೋಃ[1]
ಪ್ರಧಾನತೋ ವಿಂಶತಿ ರ್ಭವೇತ್ರ್ಯಧಿಕಾ ।
ಯಸ್ಮಾತ್ಪ್ರಕೃತಿ ಗುಣಾನಾಂ
ನಾತ್ಯಂತಂ ವಸ್ತುತೋ ಭೇದಃ ॥೪॥ [೨೪]

[ಪ್ರಧಾನತಃ] ಪ್ರಕೃತಿಯದೆಸೆಯಿಂದ [ಪುರುಷಸ್ಯ] ಪಶುವೆನಿಸಿರುವ ಪುರುಷನ (ಭೋಗಹೇತೋಃ) ತಾನುಮಾಡಿದ ಪುಣ್ಯಪಾಪಗಳಿಗೆ ಫಲ ರೂಪವಾದ ಸುಖದುಃಖಗಳನ್ನು ಅನುಭವಿಸುವುದಕ್ಕಾಗಿ ಎಂದರೆ ಸುಖ ದುಃಖಗಳನ್ನು ಅನುಭವಿಸಬೇಕಾದರೆ ಪಂಚಭೂತರೂಪಶರೀರ ಮತ್ತು ಭೋಗಕ್ಕೆ ಸಾಧನವಾದ ಇಂದ್ರಿಯಗಳು ಮತ್ತು ಶಬ್ದ ಮೊದಲಾದ ವಿಷಯಗಳು ಆವಶ್ಯಕ. ಆದ್ದರಿಂದ ತತ್ತ್ವಗಳು [ತ್ರ್ಯಧಿಕಾ] ಮೂರು ಅಧಿಕವಾದ [ವಿಂಶತಿಃ] ಇಪ್ಪತ್ತು [ಭವೇತ್] ಆಗುತ್ತದೆ. [ಯಸ್ಮಾತ್] ಯಾವಕಾರಣದ ದೆಶೆಯಿಂದ [ಪ್ರಕೃತಿಗುಣಾನಾಂ] ಪ್ರಧಾನ ಮತ್ತು ಗುಣಗಳಿಗೆ [ವಸ್ತುತಃ] ಪರಮಾರ್ಥದಿಂದ [ಅತ್ಯಂತಂ] ಮಿಗಿಲಾದ [ಭೇದಃ] ಭೇದವು [ನ] ಇಲ್ಲ.

ಸಂದೇಹ:—ಹಿಂದೆ 'ಅವ್ಯಕ್ತಂ ಮಾಯಾತಃ' ಎಂಬಲ್ಲಿ ಮಾಯೆಯ ತರುವಾಯ ಮುಂದಿನ ತತ್ತ್ವಗಳು ಇಪ್ಪತ್ತುನಾಲ್ಕು ಎಂದು ಹೇಳಲಾಯಿತು. ಆದರೆ ಈಗ ಇಪ್ಪತ್ತುಮೂರು [ತ್ರ್ಯಧಿಕವಿಂಶತಿ] ಎಂದು ಹೇಳಿದ್ದು ವಿರೋಧ ವಾಗಲಿಲ್ಲವೆ ? ಎಂದರೆ

ಸಮಾಧಾನ:—ಇಲ್ಲ; ಏಕೆಂದರೆ "ಯಸ್ಮಾತ್ಪ್ರಕೃತಿ" ಎಂದುದರಿಂದ ಇದಕ್ಕೆ ಸಮಾಧಾನವನ್ನು ಹೇಳುತ್ತಾನೆ. ಗುಣಗಳೇ 'ಪ್ರಕೃತಿ' ಎಂಬುದು ಸಾಂಖ್ಯರ ಮತ. ಅದನ್ನು ನಿರಾಸಮಾಡುವುದಕ್ಕಾಗಿ ಹೀಗೆ ಹೇಳಿದೆ. ಅವು ಗಳಿಗೆ ಚೈತನ್ಯವಿಲ್ಲದ ಪಕ್ಷದಲ್ಲಿ ಘಟಾದಿಗಳಂತೆ ಅವುಗಳ ಸಿದ್ಧಿಯೂ ಕಾರಣಾಂತರದಿಂದ ಆಗಬೇಕಾಗುತ್ತದೆ. ಆದ್ದರಿಂದ ನಾವು ಕಾರ್ಯಕಾರಣ ಗಳಿಗೆ ಅಭೇದನ್ಯಾಯವನ್ನಿಟ್ಟುಕೊಂಡು ಪ್ರಧಾನ [ಪ್ರಕೃತಿ] ಕ್ಕೂ ಗುಣ

[1] ಭೋಗಾರ್ಥಂ (ಗ)

ಗಳಿಗೂ ವಸ್ತುತಃ ಭೇದವಿಲ್ಲವೆಂದು ಹೇಳಿ ಇಪ್ಪತ್ತುಮೂರು ಎಂದು ಹೇಳಿದೆವು. ಶೈವರಹಸ್ಯದಲ್ಲಿ ಇದನ್ನು ಸಮರ್ಥಿಸಿದೆ.

ಅವ್ಯಕ್ತಂ ಬುದ್ಧ್ಯಹಂಕೃತಿ ಮನಾಂಸಿ ಚತ್ವಾರಿ ಶಬ್ದಮಾತ್ರಾದ್ಯಂ ।
ಶ್ರೋತ್ರಾದ್ಯಂ ವಾಗಾದ್ಯಂ ವಿಯದಾದ್ಯಂ ಪಂಚಕಂ ಚ ಪೃಥಕ್ ॥
ತತ್ತ್ವಚತುರ್ವಿಂಶತಿಕಂ ತ್ರಿಗುಣಾತ್ಮಕಯೈವ ಕೇವಲಾಶುದ್ಧಮ್ ।

ಹೀಗೆ ಶುದ್ಧತತ್ತ್ವಗಳನ್ನೂ ಅಶುದ್ಧತತ್ತ್ವಗಳನ್ನೂ ಹೇಳಿ, ಅವುಗಳಲ್ಲಿ ಮೊದಲನೆಯ ಶಿವತತ್ತ್ವಕ್ಕೆ ಲಕ್ಷಣವನ್ನು ಹೇಳುತ್ತಾನೆ.

ವ್ಯಾಪಕಮೇಕಂ ನಿತ್ಯಂ
ಕಾರಣಮಖಿಲಸ್ಯ ತತ್ತ್ವಜಾತಸ್ಯ ।
ಜ್ಞಾನಕ್ರಿಯಾಸ್ವಭಾವಂ
ಶಿವತತ್ತ್ವಂ ಜಗದುರಾಚಾರ್ಯಾಃ ॥೫॥ [೨೫]

[ಶಿವತತ್ತ್ವಂ] ಶುದ್ಧಾಧ್ವಕ್ಕೆ ಉಪಾದಾನವಾಗಿರುವ ಬಿಂದುವು [ವ್ಯಾಪಕಂ] ತನ್ನಕಾರ್ಯಗಳಾದ ನಿವೃತ್ತಿಮುಂತಾದ ಕಲೆಗಳಿಂದ ಶುದ್ಧಾಶುದ್ಧತತ್ತ್ವಗಳನ್ನು ವ್ಯಾಪಿಸಿಕೊಂಡಿರುವುದೆಂದೂ [ಏಕಂ] ಅದ್ವಿತೀಯವಾದ್ದರಿಂದ ಒಂದೇ ಆಗಿರುವುದು. ಎಂದರೆ ಸರ್ವಭೂತ ಸ್ವರೂಪದಿಂದ ಇರುವುದು ಎಂದು ಅರ್ಥ. [ನಿತ್ಯಂ] ಕೇಡಿಲ್ಲದುದೆಂದೂ, [ಅಖಿಲಸ್ಯ] ಎಲ್ಲ [ತತ್ತ್ವಜಾತಸ್ಯ] ಶುದ್ಧತತ್ತ್ವಸಮೂಹಕ್ಕೆ [ಕಾರಣಂ] ಉಪಾದಾನ ಕಾರಣವಾಗಿರುವುದೆಂದೂ [ಜ್ಞಾನಕ್ರಿಯಾಸ್ವಭಾವಂ] ಜ್ಞಾನಕ್ರಿಯೆಗಳೇ ಸ್ವಭಾವವಾಗಿ ಉಳ್ಳದ್ದು ಎಂದೂ [ಆಚಾರ್ಯಾಃ] ಆಚಾರ್ಯರು (ಜಗದುಃ) ಹೇಳಿದ್ದಾರೆ.

ವಿಚಾರ:—ಇಲ್ಲಿ ತನಗಿಂತಲೂ ಬೇರೊಂದು ಇರುವುದಾದರೆ ಅದು ಎಲ್ಲವನ್ನೂ ಬೆಳಗೀತು ಎಂಬ ಕಾರಣದಿಂದ "ವ್ಯಾಪಕವೆಂದೂ, ತನಗೆ ಸಮ ಇಲ್ಲವೆ ಅಸಮಪುರುಷನಿಲ್ಲದ್ದರಿಂದ 'ಏಕ' ವೆಂದೂ, ವ್ಯಾಪಕವಾದದ್ದು ಒಂದೇ ಎಂದರೆ ಆಕಾಶವೂ ಆಗಬಹುದು. ಆದ್ದರಿಂದ 'ನಿತ್ಯ' ವೆಂದೂ, ವ್ಯಾಪ್ತಿ, ನಿತ್ಯತ್ವ ಮತ್ತು ಏಕತ್ವಗಳು ಪಶುವಿಗೂ ಉಂಟು. ಆದ್ದರಿಂದ ಅದರ ನಿವೃತ್ತಿಗಾಗಿ 'ಕಾರಣಮಖಿಲಸ್ಯ' ಎಂದೂ, ಮಾಯೆಗೂ ಸಹ ವ್ಯಾಪಕತ್ವ

ನಿತ್ಯತ್ವ, ಏಕತ್ವ ಮತ್ತು ಅಖಿಲಕಾರಣತ್ವವುಂಟು, ಆದ್ದರಿಂದ ಅಲ್ಲಿ ಅತಿ ವ್ಯಾಪ್ತಿಯನ್ನು ತಡೆಯಲು 'ಜ್ಞಾನಕ್ರಿಯಾಸ್ವಭಾವಂ' ಎಂದೂ ದಳಗಳನ್ನು ಕೊಡಲಾಗಿದೆ. ಆದ್ದರಿಂದ ಆ ಶಿವತತ್ತ್ವವು ವ್ಯಾಪಕ, ಏಕ, ನಿತ್ಯ, ಅಖಿಲ ತತ್ತ್ವಕಾರಣ ಹಾಗೂ ಜ್ಞಾನಕ್ರಿಯಾಸ್ವಭಾವವುಳ್ಳದ್ದು ಎಂಬ ಇಷ್ಟು ವಿಶೇಷಣಗಳನ್ನು ಕೊಡಲಾಗಿದೆ.

ಶುದ್ಧಾಧ್ವಕ್ಕೆ ಉಪಾದಾನವಾದ ಬಿಂದು ವೆನಿಸಿದ ಶಿವತತ್ತ್ವವು ಶುದ್ಧಾ ಶುದ್ಧಾತ್ಮಕವಾದ ಜಗತ್ತನ್ನು ನಿಜಪರಿಣಾಮರೂಪವಾದ ನಿವೃತ್ತಿ ಮೊದಲಾದ ಕಲೆಗಳಿಂದ ವ್ಯಾಪಿಸಿದೆ ಎಂದು ಅರ್ಥ. ಇದನ್ನೇ "ಕಲಾವಸ್ಥಾನಿ ತತ್ತ್ವಾನಿ ತತ್ತ್ವಸ್ಥೋಭುವನ ವ್ರಜಃ "ಇತ್ಯಾದಿಗಳಿಂದ ಸಮರ್ಥಿಸಲಾಗಿದೆ. ಅದು ಏಕ ಎಂದರೆ ಪರಮಕಾರಣ. ಅನೇಕತ್ವವನ್ನು ಒಪ್ಪಿದರೆ ಜಡತ್ವ ಮತ್ತು ಅನೇಕತ್ವಗಳುಂಟಾಗಿ ಅದೂ ಘಟಾದಿಗಳಂತೆ ಕಾರ್ಯವೇ ಆಗುತ್ತದೆ. 'ನಿತ್ಯ' ಎಂದು ಹೇಳದಿದ್ದರೆ ಅದು ಪರಮಕಾರಣವಾಗುವುದಿಲ್ಲ. ಮೇಲಾಗಿ ಅದಕ್ಕೆ ಮತ್ತೊಂದು ಉಪಾದಾನವು ಬೇಕಾಗುತ್ತದೆ. ಆಗ ಅನವಸ್ಥಾದೋಷ. 'ಅಖಿಲಸ್ಯತತ್ತ್ವಜಾತಸ್ಯ' ಎಂಬುದಕ್ಕೆ ಶುದ್ಧತತ್ತ್ವಜಾತಕ್ಕೆ ಉಪಾದಾನ ಎಂದು ಹೇಳಬೇಕು; ಅಶುದ್ಧತತ್ತ್ವಕ್ಕಲ್ಲ. ಅಶುದ್ಧವು ಮಾಯೆಯಿಂದ ಹುಟ್ಟಿದ್ದು. ಶುದ್ಧಕ್ಕೆ ಅಶುದ್ಧಕಾರಣತ್ವವು ಅನ್ವಯಿಸುವುದಿಲ್ಲ. ಶಿವತತ್ತ್ವವು ಜ್ಞಾನಕ್ರಿಯಾಸ್ವಭಾವವುಳ್ಳದ್ದು. ಅಂದರೆ ಆಯಾ ಭುವನೇಶ್ವರರ ಆರಾಧನ ಅಥವಾ ದೀಕ್ಷೆಯಿಂದ ತನ್ನ ಕಾರ್ಯವೆನಿಸಿದ ಶುದ್ಧಾಧ್ವಭುವನವನ್ನು ಹೊಂದಿ ದವರ ಜ್ಞಾನಕ್ರಿಯೆಗಳನ್ನು ಪ್ರಕಟಿಸುತ್ತದೆ. ಮೃಗೇಂದ್ರದಲ್ಲಿ—

ಶಾಂತ್ಯತೀತಂ ಪರಂ ತತ್ತ್ವಮವಿನಾಶ್ಯವ್ಯಯಾತ್ಮಕಮ್ ।
ಯೇನೋನ್ಮೀಲಿತ ಸಾಮರ್ಥ್ಯಾಃ ಪಶವೋ ಜೀವತಾಂ ಗತಾಃ ॥

ಎಂಬುದು ಇದನ್ನು ಸಮರ್ಥಿಸುತ್ತದೆ.

ಸಂದೇಹ:—ಮಾಯೆಯೂ ಕೂಡ ಕಲಾದಿಗಳ ಮೂಲಕ ಜ್ಞಾನ ಕ್ರಿಯಾಪ್ರಕಾಶವೇ ಅಲ್ಲವೆ ?.

ಸಮಾಧಾನ:—ನಿಜ; ಮಾಯೆಯಿಂದ ಹುಟ್ಟಿದ ಜ್ಞಾನಾದಿಗಳು ಅಲ್ಪ ವಿಷಯಕಗಳು. ಮತ್ತು ಅವು ಅನಾತ್ಮದಲ್ಲಿ ಆತ್ಮಭಾವನೆಗೆ ಕಾರಣಗಳು.

ಆದ್ದರಿಂದ ಅವು ಶಿವಾದಿಶುದ್ಧತತ್ತ್ವಬೋಧಕವೆಂದು ಹೇಳಲಾಯಿತು.

'ನಿಮಿತ್ತಮೀಶ್ವರಸ್ತೇಷಾಮುಪಾದಾನಂ ಸ ಬಿಂದುರಾಟ್' ಎಂದು ಪರಾತಂತ್ರವು ಇದನ್ನೇ ಸಾರಿದೆ. 'ಸಾ ಚ ಕುಂಡಲಿನೀ ಶಂಭೋಃ ಶಕ್ತಿಃ ಶುದ್ಧಾ ಜಡಾತ್ಮಿಕಾ" ಎಂಬ ಉಕ್ತಿಯೂ ಇದಕ್ಕೆ ಪೋಷಕ. ಆದ್ದರಿಂದ ಶಿವ ತತ್ತ್ವವು ಉಪಾದಾನ ಮತ್ತು ಮಹಾಮಾಯೆ ಎಂದು ಆಚಾರ್ಯರು ಹೇಳುತ್ತಾರೆ. ಈ ಕಾರಿಕೆ ಪರಶಿವ ಅಥವಾ ಶಕ್ತಿ ವಿಷಯಕವಲ್ಲ.

ಏಕೆಂದರೆ ಶಿವತತ್ತ್ವದಿಂದ ಪೃಥಿವೀತತ್ತ್ವದವರೆಗೆ ಎಲ್ಲ ತತ್ತ್ವಗಳ ಲಕ್ಷಣವನ್ನು ಹೇಳುವ ಸಂದರ್ಭದಲ್ಲಿ ತತ್ತ್ವಾತೀತವಾದ ಶಿವ-ಶಕ್ತಿಗಳ ಪ್ರಸ್ತಾಪಕ್ಕೆ ಕಾರಣವಿಲ್ಲ. ಮೇಲಾಗಿ ಹೀಗೆ ಹೇಳಿದರೆ ಅವೂ ಶಿವತತ್ತ್ವ ರೂಪವೇ ಆದ್ದರಿಂದ ಅವಕ್ಕೆ ಪರಿಣಾಮಿತ್ವವುಂಟಾಗಿ ಅಚೇತನತ್ವಮುಂತಾದ ದೋಷಗಳು ಸಂಭವಿಸುತ್ತವೆ.

ಇನ್ನು ಅದನ್ನು ಚಿದ್ವಿವರ್ತವೆಂದೂ ಹೇಳಲಾಗುವುದಿಲ್ಲ. ಹಾಗೆ ಹೇಳಿದರೆ ಸರ್ವಪ್ರಮಾಣ ಸಿದ್ಧವಾದ ಜಗತ್ತನ್ನು ಅಸತ್ಯವೆಂದು ಹೇಳಬೇಕಾದೀತು! ವಿವರ್ತವು ಅಸತ್ಯವೆಂದು ಸಿದ್ಧವಾಗಿದೆ. "ನಾತ್ರ ಶಕ್ತಿರುಪಾದಾನಂ ಚಿದ್ರೂಪತ್ವಾದ್ಯಥಾ ಶಿವಃ । ಪರಿಣಾಮೋಚಿತಪ್ರೋಕ್ತಶ್ಚೇತನಸ್ಯ ನ ಯುಜ್ಯತೇ ॥ ಚಿತೋಃ ವಿವರ್ತಏವೋಕ್ತಸ್ತಥಾತ್ವೇ ಕಾರ್ಯಶೂನ್ಯತಾ । ಸರ್ವಪ್ರಮಾಣಸಿದ್ಧಂ ಚಿದ್ವಿವರ್ತಂ ಕಥಂ ಜಗತ್" ಮಾಯಾಪಿ ನಾತ್ರೋಪಾದಾನಂ ಮೋಹಕತ್ವಾತ್ ಸ್ವತೇಜಸಾ । ಸಾ ಚ ಕುಂಡಲಿನೀ ಶಂಭೋಃ ಶಕ್ತಿಃ ಶುದ್ಧಾ ಜಡಾತ್ಮಿಕಾ ॥ ನ ತಾದಾತ್ಮ್ಯಸ್ಥಿತಾ ಕಿಂತು ವರ್ತಮಾನಾ ಪರಿಗ್ರಹೇ । ಶಿವೇ ಕರ್ತರಿ ತಾದಾತ್ಮ್ಯನ್ನೇಯಂ ಕುಂಡಲಿನೀ ಸ್ಥಿತಾ॥ ಉಪಾದಾನಂ ತ್ವತೋ ಹೇತೋಃ ಕುಲಾಲೇ ಮೃತ್ತಿಕಾ ಯಥಾ ॥ ಮುಂತಾದ ಉಕ್ತಿಗಳು ಇಲ್ಲಿ ಪ್ರಮಾಣವಾಗಿವೆ. ಶಬ್ದಬ್ರಹ್ಮವಾದಿಯ ಮತದಲ್ಲಿಯೂ ಕೂಡ ಆತ್ಮನಿಗೇ ನಾದಾದಿ ಕ್ರಮದಿಂದ ಬಹು ಅವಸ್ಥಾನವಿಲ್ಲವೆಂದು ನಾದ ಕಾರಿಕೆಯಲ್ಲಿ ಹೇಳಿದೆ. ಆದ್ದರಿಂದ ಮಹಾ ಮಾಯೆಯು ಶಬ್ದೋತ್ಪಾದನತ್ವ ದಿಂದಲೂ ಸಿದ್ಧಿಸುತ್ತದೆ.

ಈ ಶಿವತತ್ತ್ವವು ತತ್ತ್ವಗಳಿಗೆ ಕಾರಣ ಎಂಬುದು ಉಪಲಕ್ಷಣ.

ಆದರಿಂದ ಇದು ವರ್ಣ ಪದ ಮಂತ್ರ ಕಲಾ ತತ್ತ್ವ ಮತ್ತು ಭುವನ ಎಂಬ ಷಡಧ್ವಕ್ಕೂ ಉಪಾದಾನ ಕಾರಣ ಎಂದು ತಿಳಿಯಬೇಕು.

ಸ್ವರಾಃ ಷೋಡಶವರ್ಣಾಧ್ವಾ ತಾರಾದ್ಯಂ ನವಕಂ ಪದಮ್ ।
ಮಂತ್ರಾ ಷಡ್ವರ್ಣ ಪಂಚಾರ್ಣಾ ತತ್ತ್ವಂ ತತ್ರ ಶಿವಾತ್ಮಕಮ್ ॥
ನೇನ್ತಂ ನಮಃ ಪರಾಯಾದ್ಯಂ ತ್ರಿಪಂಚ ಭುವನಾನ್ಯಪಿ ।
ನಿವೃತ್ತ್ಯಾದೀನಿ ಪಂಚಾತ್ರ ಶಾಂತ್ಯತೀತಾದಯಃ ಕಲಾಃ ॥
ಸರ್ವತಂತ್ರೇ ಪದಂ ಯೋಜ್ಯಂ ಸ್ಯಾತ್ ಷಡಧ್ವಾತ್ಮನೇ ನಮಃ ॥

ಅಸ್ಮಿನ್ವಿಲೀಯ[1] ನಿಖಿಲಾ
ಇಚ್ಛಾದ್ಯಾಃ ಶಕ್ತಯಃ ಸ್ವಕಂ ಕಾರ್ಯಮ್[2] ।
ಕುರ್ವತಿ ತೇನ ತದಿದಂ
ಸರ್ವಾನುಗ್ರಾಹಕಂ ಪ್ರಾಹುಃ ॥೬॥ (೨೬)

(ನಿಖಿಲಾಃ) ಸಮಸ್ತವಾದ [ಇಚ್ಛಾದ್ಯಾಃ] ಇಚ್ಛಾ, ಜ್ಞಾನ ಮತ್ತು ಕ್ರಿಯೆಗಳೆಂಬ [ಶಕ್ತಯಃ] ಪರಶಿವನ ಶಕ್ತಿಗಳು [ಅಸ್ಮಿನ್] ಈ ಉಪಾದಾನ ರೂಪವಾದ ಶಿವತತ್ತ್ವದಲ್ಲಿ [ವಿಲೀಯ] ಅದಕ್ಕೆ ಪ್ರೇರಕವಾಗಿದ್ದು [ಸ್ವಕಂ] ತಮ್ಮ [ಕಾರ್ಯಂ] ಸೃಷ್ಟ್ಯಾದಿ ಪಂಚಕೃತ್ಯಗಳನ್ನು [ಕುರ್ವಂತಿ] ಮಾಡುತ್ತವೆ. [ತೇನ] ಆದರಿಂದ [ತದಿದಂ] ಈ ಶಿವತತ್ತ್ವವನ್ನು [ಸರ್ವಾನುಗ್ರಾಹಕಂ] ಪರಂಪರೆಯಿಂದ ಎಲ್ಲಕ್ಕೂ ಅನುಗ್ರಾಹಕವೆಂದು [ಪ್ರಾಹುಃ] ಹೇಳುತ್ತಾರೆ. ಅಷ್ಟೇ ಹೊರತು ಶಕ್ತ್ಯಧಿಷ್ಠಾನವಿಲ್ಲದೆ ಅದು ಸರ್ವಾನುಗ್ರಾಹಕವಾಗಲಾರದು. ಏಕೆಂದರೆ ಅಚೇತನಕ್ಕೆ ಚೇತನಾಧಿಷ್ಠಾನವಿಲ್ಲದೆ ಕಾರ್ಯೋತ್ಪಾದನ ಯೋಗ್ಯತೆಯಿರುವುದಿಲ್ಲ.

ಹೀಗೆ ಶಿವತತ್ತ್ವವನ್ನು ನಿರೂಪಿಸಿ ಆದರ ಕಾರ್ಯವಾದ ಶಕ್ತಿ ಮೊದಲಾದ ತತ್ತ್ವಗಳನ್ನು ಹೇಳುತ್ತಾನೆ.

ಚಿದಚಿದನುಗ್ರಹ ಹೇತೋ
ರಸ್ಯ ಸಿಸೃಕ್ಷೋರ್ಯ ಆದ್ಯ ಉನ್ಮೇಷಃ ।

---

[1]ಅಸ್ಮಿನ್ ನಿಲೀಯ (ಕ) [2]ಕೃತ್ಯಂ (ಖ-ಗ)

ತಚ್ಛಕ್ತಿತತ್ತ್ವಮಭಿ-
ಹಿತಮವಿಭಾಗಾಪನ್ನಮಸ್ಯೈವ ||೭|| (೨೭)

ಪಾಶಗಳನ್ನು ಅನುಗ್ರಹಿಸುವುದಕ್ಕಾಗಿ [ಸಿಸೃಕ್ಷೋಃ] ಸೃಷ್ಟಿಸುವ ಇಚ್ಛೆಯುಳ್ಳ ಪರಶಿವನ [ಚಿದಚಿದನುಗ್ರಹಹೇತೋಃ] ಚಿತ್ತು ಅಚಿತ್ತುಗಳ ಅನುಗ್ರಹಕ್ಕೆ ಸಾಧನವಾಗಿರುವ (ಅಸ್ಯ) ಈ ಶಿವತತ್ತ್ವದ [ಯಃ] ಯಾವ [ಆದ್ಯಃ] ಮೊದಲ [ಉನ್ಮೇಷಃ] ಉನ್ನಿದ್ರಭಾವ [ಈಕ್ಷಣ] ಎಂದರೆ ಶಾಂತ್ಯಾದಿ ಭುವನ ರೂಪವಾದ ಪರಿಣಾಮವಿದೆಯೋ [ತತ್] ಅದು [ಶಕ್ತಿತತ್ತ್ವಂ] ಶಕ್ತಿ ತತ್ತ್ವವೆಂದು [ಅಭಿಹಿತಂ] ಹೇಳಲ್ಪಟ್ಟಿತು. [ಅವಿಭಾಗಪನ್ನಂ] ಅಪೃಥಕ್ ಸಿದ್ಧವಾದ (ನಿರವಯವ) ರೂಪವು [ಅಸ್ಯೈವ] ಈ ಪರಮಕಾರಣವಾದ ಬಿಂದುವಿಗೇ ಇದೆ.

ವಿಚಾರ:—ಶಕ್ತಿತತ್ತ್ವವು ಶಿವತತ್ತ್ವಕ್ಕಿಂತ ಬೇರೆಯಲ್ಲ. ಶಕ್ತಿ ಮತ್ತು ಶಕ್ತಿಮಾನ್‌ತತ್ತ್ವಗಳಿಗೆ ಅಭೇಧ. ಭಟ್ಟಪಾದರು ಸೂಚಿಸಿರುವ

'ಶಕ್ತಯಃ ಸರ್ವಭಾವಾನಾಂ ಕಾರ್ಯಾರ್ಥಾಪತ್ತಿಗೋಚರಾಃ"

ಎಂಬ ಉಕ್ತಿಯ ಪರಾಶಕ್ತಿಯು ಪರಮೇಶ್ವರಾಭಿನ್ನವೆಂದು ಹೇಳುತ್ತದೆ. ಮತಂಗದಲ್ಲಿಯೂ ಕೂಡ

ಪತ್ಯುಃ ಶಕ್ತಿಃ ಪರಾ ಸೂಕ್ಷ್ಮಾ ಜಾಗ್ರತೋ ದ್ಯೋತನಕ್ಷಮಾ।
ತಯಾ ಪ್ರಭುಃ ಪ್ರಬುದ್ಧಾತ್ಮಾ ಸ್ವತಂತ್ರಃ ಸ ಸದಾಶಿವಃ ॥

ಆದ್ದರಿಂದಲೇ ಈ ಶಕ್ತಿ ತತ್ತ್ವಕ್ಕೂ ಷಡಧ್ವವ್ಯಾಪ್ತಿಯುಂಟು.

ಆ ಬಿಂದುವು ಮೂಲಕಾರಣವಾದ್ದರಿಂದ ನಿರವಯುವ. ಅದರ ಕಾರ್ಯಗಳೆನಿಸಿರುವ ತತ್ತ್ವಗಳು ಭುವನಗಳಿಗೆ ಆಧಾರಗಳಾದ್ದರಿಂದ ಸಾಕಾರಗಳು ಎಂದು ಅರ್ಥ. ಶಿವನು ಚಿದ್ರೂಪರಾದ ಆತ್ಮರಿಗೆ ಮೋಕ್ಷವನ್ನು ಕೊಡುವುದಕ್ಕಾಗಿ ಅವರ ಮಲವು ಪಕ್ವವಾಗಲು ಮತ್ತು ಕರ್ಮವನ್ನು ಅನುಭವಿಸಲು ಸೃಷ್ಟಿ ಮೊದಲಾದುವನ್ನು ಮಾಡಿ ಅಚಿದ್ರೂಪವಾದ ಪಾಶಗಳಿಗೆ ಅನುಗ್ರಹವನ್ನುಂಟು ಮಾಡುತ್ತಾನೆ.

ಅಭಿಪ್ರಾಯವಿಷ್ಟು—ಚಿತ್ತು ಮತ್ತು ಅಚಿತ್ತುಗಳನ್ನು ಅನುಗ್ರಹಿಸುವುದಕ್ಕಾಗಿ ಪರಶಿವನು ಅದನ್ನು ಸೃಷ್ಟಿಸಿದನು. ಈ ಸೃಷ್ಟಿರಚನೆಗೆ ಸಾಧನವಾದ ಮೊದಲ ಉನ್ಮೇಷ[ಪರಿಣಾಮ]ವೇ ಶಕ್ತಿತತ್ತ್ವ. ಅದು ಶಾಂತಿ ಮೊದಲಾಗಿ ಭುವನಾತ್ಮಕವೂ ನಾದಾತ್ಮಕವೂ ಆಗಿದೆ. ಹಾಗಾದರೆ ಈ ಶಕ್ತಿತತ್ತ್ವವು ಬಿಂದುವಿನಂತೆ ನಿರವಯವವೊ? ಅಥವಾ ಸಾವಯುವವೋ? ಎಂದರೆ ಅದು ವಿಭಾಗಾಪನ್ನ ಎಂದರೆ 'ವಿಭಜ್ಯಂತೇ ಏಭಿಃ ಪದಾರ್ಥಾಃ ಪರಸ್ಪರಂ ವಿವಿಚ್ಯಂತ ಇತಿ ವಿಭಾಗಾ ಅವಯವಾಃ । ಅವಿಭಾಗಾಪನ್ನಂ ನಿರವಯುವ ಸ್ವರೂಪಂ" ಎಂಬ ವ್ಯುತ್ಪತ್ತಿಯಿಂದ ಅಂಥ ನಿರವಯುವ ಸ್ವರೂಪವು ಆ ಪರಮ ಕಾರಣವಾದ ಬಿಂದುವಿಗೇ ಇದೆ. ಶಕ್ತಿ ಮೊದಲಾದ ಕಾರ್ಯರೂಪತತ್ತ್ವಗಳು ಮಾತ್ರ ವ್ಯಕ್ತವೂ ಭುವನಾದಿಗಳಿಗೆ ಆಧಾರವೂ ಆದ್ದರಿಂದ ಅವು ಸಾವಯುವ.

ಸಂದೇಹ:—ಶಿವತತ್ತ್ವದಲ್ಲಿಯೂ ಕೂಡ ಭುವನಗಳು ಇರುವುದಾಗಿ ಹೇಳಿದೆಯಲ್ಲವೆ?

ಸಮಾಧಾನ:—ನಿಜ; ಆದರೆ ಅಲ್ಲಿ ಸಾಕ್ಷಾತ್ ಇರುವುದಿಲ್ಲ. ಅವು ಶಾಂತಿಮಸ್ತಕದಲ್ಲಿವೆಯಲ್ಲದೆ ಮಾಯಾಭುವನಾದಿಗಳಂತೆ ಕಲಾಮಸ್ತಕದಲ್ಲಿಲ್ಲವಾದ್ದರಿಂದ ವಿರೋಧವಿಲ್ಲ.

ಇನ್ನು ಸದಾ ಶಿವತತ್ತ್ವವನ್ನು ಹೇಳುತ್ತಾನೆ.

ಜ್ಞಾನಕ್ರಿಯಾಖ್ಯ ಶಕ್ತ್ಯೋ-
ರಪಕರ್ಷೋತ್ಕರ್ಷಯೋ[1]ರಭಾವೇನ ।
ಯಃ ಪ್ರಸರಸ್ತಂ ಪ್ರಾಹುಃ
ಸದಾಶಿವಾಖ್ಯಂ ಬುಧಾಸ್ತತ್ತ್ವಮ್ ॥೮॥ [೨೮]

(ಜ್ಞಾನಕ್ರಿಯಾಖ್ಯಶಕ್ತ್ಯೋಃ) ಸೃಜಿಸುವ ಇಚ್ಛೆಯುಳ್ಳ ಪರಮೇಶ್ವರನ ಜ್ಞಾನಕ್ರಿಯಾಶಕ್ತಿಗಳ (ಅಪಕರ್ಷೋತ್ಕರ್ಷಯೋಃ) ಕುಂದು ಮತ್ತು ಹೆಚ್ಚು

---

[1]ಉತ್ಕರ್ಷ ನಿಕರ್ಷಯೋಃ (ಗ)

ಗಳ (ಅಭಾವೇನ) ಇಲ್ಲದಿರುವುದರಿಂದ ಎಂದರೆ ಸಾಮ್ಯಾಧಿಷ್ಠಾನದಿಂದ (ಯಃ) ಯಾವ (ಪ್ರಸರಃ) ಉಪಾದಾನವೆನಿಸಿದ ಬಿಂದುವಿನ ಎರಡನೆಯ ಪರಿಣಾಮವು ವುಂಟೊ (ತಂ) ಅದನ್ನು (ಸದಾಶಿವಾಖ್ಯಂ) ಸದಾಶಿವ ಎಂಬ (ತತ್ತ್ವಂ) ತತ್ತ್ವವೆಂದು (ಬುಧಾಃ) ಜ್ಞಾನಿಗಳು (ಪ್ರಾಹುಃ) ಹೇಳುತ್ತಾರೆ.

ವಿಚಾರ:—ಪರಾಶಕ್ತಿಯ ವಿಕಾರವೆನಿಸಿದ ಜ್ಞಾನೇಚ್ಛಾಕ್ರಿಯಾ ಶಕ್ತಿಗಳ ಪ್ರಸರಾವಸ್ಥೆಯಲ್ಲಿ ಜ್ಞಾನ ಮತ್ತು ಕ್ರಿಯಾ ಎಂಬ ಎರಡು ಶಕ್ತಿಗಳ ಸಾಮ್ಯವುಂಟಾದಾಗ ಶಿವತತ್ತ್ವವೇ "ಸದಾಶಿವ" ತತ್ತ್ವನೆನಿಸುತ್ತದೆ. ಈ ವಿಷಯವನ್ನು ಸಿದ್ಧಾಂತ ಹೃದಯವು ಹೀಗೆಂದಿದೆ–

ಜ್ಞಾನಕ್ರಿಯಾಖ್ಯೇನ್ಯಕ್ ತುಲ್ಯೇ ಶಕ್ತೀ ಚ್ಯೋದ್ರೇಕ ಮಶ್ನುತೇ ।
ಯಃದಾ ಸದಾ ಶಿವಾಖ್ಯಸ್ತು ತದಾಸೌ ಶಿವ ಉಚ್ಯತೇ ॥

ಸದಾಶಿವ ತತ್ತ್ವ ಸ್ವರೂಪವನ್ನು ಕುರಿತು ಚಂದ್ರಜ್ಞಾನಾಗಮವು ಹೀಗೆಂದಿದೆ–"ಸದಾಶಿವಾಖ್ಯಂ ವಿಮಲಂ ಶದ್ಧಸ್ಫಟಿಕ ಸನ್ನಿಭಮ್" ಸದಾಶಿವ ತತ್ತ್ವಕ್ಕೂ ಷಡಧ್ವವ್ಯಾಪ್ತಿಯುಂಟು.

ಮೂರನೆಯ ಪ್ರಸರವೇ ಈಶ್ವರತತ್ತ್ವ.

ನ್ಯಗ್ಭವತಿ ಯತ್ರ
ಶಕ್ತಿರ್ಜ್ಞಾನಾಖ್ಯೋ ದ್ರಿಕ್ತತಾಂ[1]ಕ್ರಿಯಾಂ ಭಜತೇ ।
ಈಶ್ವರತತ್ತ್ವಂ ತದಿಹ
ಪ್ರೋಕ್ತಂ ಸರ್ವಾರ್ಥ ಕರ್ತೃ ಸದಾ ॥೯॥ [೨೯]

(ಯತ್ರ) ಯಾವ ಬಿಂದುವಿನ ಮೂರನೆಯ ಪರಿಣಾಮದಲ್ಲಿ [ಜ್ಞಾನಾಖ್ಯಾ] ಜ್ಞಾನವೆಂಬ ಹೆಸರುಳ್ಳ [ಶಕ್ತಿಃ] ಶಿವಶಕ್ತಿಯು [ನ್ಯಗ್ಭವತಿ] ಅಲ್ಪವಾಗುತ್ತದೆಯೋ [ಕ್ರಿಯಾ] ಕ್ರಿಯಾ ಶಕ್ತಿಯು [ಉದ್ರಿಕ್ತತಾಂ] ಮಿಗಿಲಾಗಿ (ಭಜತೇ) ಆಗುತ್ತದೆಯೋ [ತತ್] ಅದು [ಇಹ] ಇಲ್ಲಿ [ಈಶ್ವರತ್ವಂ] ಈಶ್ವರತತ್ತ್ವವೆಂದು [ಪ್ರೋಕ್ತಂ] ಹೇಳಲ್ಪಟ್ಟಿತು. [ಸದಾ]

---

[1]ಉದ್ವೃತ್ತತಾಂ (ಶ)

ಯಾವಾಗಲೂ (ಸರ್ವಾರ್ಥಕರ್ತೃ) ಸರ್ವಪದಾರ್ಥಗಳಿಗೆ ಕರ್ತೃವಾಗಿದೆ.

ವಿಚಾರ:—ಸಂಕುಚಿತವಾದ ಜ್ಞಾನ ಮತ್ತು ಇಚ್ಛಾ ಎಂಬ ಎರಡು ಶಕ್ತಿಗಳ ಸೌಮ್ಯಸ್ಥಿತಿಯುಲ್ಲಿ ಕ್ರಿಯೋದ್ರೇಕವಾದಾಗ ಶಿವತತ್ತ್ವವೇ ಈಶ್ವರ ತತ್ತ್ವವೆನಿಸುತ್ತದೆ.

ಈಶ್ವರತತ್ತ್ವವು ಅಗ್ನಿಯಂತೆ ಪ್ರಜ್ವಲನ ಸ್ವಭಾವವುಳ್ಳದ್ದು ।

ಅತಊರ್ಧ್ವಂ ಭವೇದನ್ಯದೀಶ್ವರಾವರಣಂ ಮಹತ್ ।
ದೀಪ್ತಪಾವಕವರ್ಣಾಭಂ ವಿದ್ಯೇ ಶಾಸ್ತ್ರತ್ರ ಸಂಸ್ಥಿತಾಃ ॥

ಈಶ್ವರತತ್ತ್ವವು 'ಸರ್ವಾರ್ಥಕರ್ತೃ' ಎಂಬುದು ಔಪಚಾರಿಕ. ಈ ತತ್ತ್ವದಲ್ಲಿ ಸರ್ವಕರ್ತೃಗಳಾದ ಅನಂತೇಶ್ವರಾದಿಗಳಿದ್ದಾರೆ. ಅವರು ಅಶುದ್ಧ ಮಾಯೆಯನ್ನು ಕ್ಷೋಭಿಸಿ, ಸರ್ವಕರ್ತೃತ್ವವನ್ನುಂಟುಮಾಡುವರು. ಇಲ್ಲಿ ಕ್ರಿಯಾಶಕ್ತಿ ಪ್ರಬಲ. ಅದು ಜಗತ್ಕರ್ತೃಗಳಾದ ಅನಂತಾದಿಗಳಿಗೆ ಅಧಿಷ್ಠಾನ. ಕ್ರಿಯಾಶಕ್ತಿಯಿಂದ ಅಧಿಷ್ಠಿತವಾದ್ದರಿಂದಲೇ ಈಶ್ವರತತ್ತ್ವವು ಸರ್ವಾರ್ಥ ಕರ್ತೃವೆನಿಸಿಕೊಂಡಿದೆ.

ವಿದ್ಯಾತತ್ತ್ವವನ್ನು ವರ್ಣಿಸುತ್ತಾನೆ.

ನ್ಯಗ್ಭವತಿ ಕರ್ತೃ
ಶಕ್ತಿರ್ಜ್ಞಾನಾಖ್ಯೋದ್ರೇಕಮಶ್ನುತೇ ಯತ್ರ ।
ತತ್ತತ್ತ್ವಂ ವಿದ್ಯಾಖ್ಯಂ
ಪ್ರಕಾಶಕಂ ಜ್ಞಾನರೂಪತ್ವಾತ್ ॥೧೦॥ [೩೦]

[ಯತ್ರ] ಯಾವ ಬಿಂದುವಿನ ನಾಲ್ಕನೆಯ ಪರಿಣಾಮದಲ್ಲಿ [ಕರ್ತೃಶಕ್ತಿಃ] ಶಿವನ ಕ್ರಿಯಾಶಕ್ತಿಯು [ನ್ಯಗ್ಭವತಿ] ಸಂಕುಚಿತವಾಗುವುದೊ (ಜ್ಞಾನಾಖ್ಯಾ) ಜ್ಞಾನಶಕ್ತಿಯು (ಉದ್ರೇಕಂ) ಹೆಚ್ಚುಗೆಯನ್ನು (ಅಶ್ನುತೇ) ಹೊಂದುತ್ತದೆಯೋ (ತತ್) ಅದು (ವಿದ್ಯಾಖ್ಯಂ) ವಿದ್ಯೆಯೆಂಬ ಹೆಸರುಳ್ಳ (ತತ್ತ್ವಂ) ತತ್ತ್ವವು (ಜ್ಞಾನರೂಪತ್ವಾತ್) ಜ್ಞಾನರೂಪವಾದ್ದರಿಂದ (ಪ್ರಕಾಶಕಂ) ತಿಳಿಸುವಂಥದು.

ವಿಚಾರ:—ಸಂಕುಚಿತವಾದ ಇಚ್ಛಾ ಕ್ರಿಯಾಶಕ್ತಿಗಳು ಸಾಮ್ಯ ದಲ್ಲಿರುವಾಗ ಜ್ಞಾನೋದ್ರೇಕವಾದರೆ ಶಿವತತ್ತ್ವವೇ ವಿದ್ಯಾತತ್ತ್ವ ವೆನಿಸುತ್ತದೆ.

ಉದ್ರಿಚ್ಯತೇ ಜ್ಞಾನಶಕ್ತಿಃ ಕ್ರಿಯೇಚ್ಛೇನ್ಯಕ್ಸಮೇ ಯದಾ ।
ತದಾಸೌ ಶುದ್ಧವಿದ್ಯಾಖ್ಯಃ ಸರ್ವವಿದ್ಯಾ ನಿಧಿಃ ಶಿವಃ ॥

ಈ ತತ್ತ್ವವು ಪದ್ಮರಾಗಕ್ಕೆ ಸಮವಾದ ವರ್ಣವುಳ್ಳದ್ದು.

ತದ್ಬಾಹ್ಯೇ ಶುದ್ಧವಿದ್ಯಾಸ್ಯಾತ್ ಕೋಟೀನಾಂ ಶತಲಕ್ಷಕಾ ।
ಸುದೀಪ್ತಾ ನಿರ್ಮಲಾ ಸೂಕ್ಷ್ಮಾ ಪದ್ಮರಾಗ ಸಮಪ್ರಭಾ ॥

ವಿದ್ಯಾತತ್ತ್ವವು ಪ್ರಕಾಶಕ ಎಂಬುದು ಔಪಚಾರಿಕ. ಈ ತತ್ತ್ವದಲ್ಲಿ ಬೋಧಕವಾಗಿರುವ ಸಪ್ತಕೋಟಿ ಮಹಾಮಂತ್ರಗಳೂ, ಕಾಮಿಕಾದಿವಾತು ಲಾಂತವಾದ ಆಗಮಗಳೂ ಇವೆ. ಈ ತತ್ತ್ವವಾಸಿಗಳ ಸರ್ವಜ್ಞತ್ವ ಪ್ರಕಾಶಕ್ಕೆ ಇದೇ ಕಾರಣ.

ಈ ತತ್ತ್ವಗಳಲ್ಲಿ ಜ್ಞಾನಕ್ರಿಯಾಶಕ್ತಿಗಳಿಗೆ ಹೆಚ್ಚು ಮತ್ತು ಕುಂದು ಎಂಬುದು ಮುಖ್ಯವಲ್ಲ. ಅಲ್ಲಿರುವ ಕರ್ತೃವಿನ ಜ್ಞಾನಕ್ರಿಯೆಗಳನ್ನು ಹೆಚ್ಚು ಕುಂದಾಗಿ ಮಾಡುವುದರಿಂದ ಉಪಚಾರವೆಂದು ಹೇಳಿದ್ದು.

ಉಪಾದಾನಕಾರಣವಾದ ಶಿವತತ್ತ್ವವು ಶಕ್ತಿ ಮೊದಲಾದ ತತ್ತ್ವಗಳ ರೂಪದಿಂದ ಪರಿಣಮಿಸುವುದು*. ಶಿವತತ್ತ್ವವು ತನ್ನಸ್ವರೂಪವು ಕೆಡದೆ ಶಕ್ತ್ಯಾದಿತತ್ತ್ವರೂಪವಾಗಿ ಪರಿಣಮಿಸುವುದು ಎಂದು ಭಾವಿಸಬೇಕು. ಅಶುದ್ಧ ಮಾಯೆಯ ಕಲಾದಿ ತತ್ತ್ವರೂಪವಾದ ಪರಿಣಾಮವು ಇಂತಹುದು.

ಹೀಗೆ ಶುದ್ಧತತ್ತ್ವಗಳನ್ನು ಹೇಳಿ ಈ ತತ್ತ್ವಗಳಲ್ಲಿರುವ ವಸ್ತುಗಳನ್ನು ಹೇಳುತ್ತಾನೆ.

---

*ಪರಿಣಾಮವು ಎರಡು ವಿಧ. ೧) ಹಾಲು ತನ್ನ ಕ್ಷೀರತ್ವವನ್ನು ಕಳೆದುಕೊಂಡು ಮೊಸರಾಗಿ ಪರಿಣಾಮ ಹೊಂದುವುದು. ೨) ಸುವರ್ಣವು ತನ್ನ ಸುವರ್ಣತ್ವವನ್ನು ಕಳೆದುಕೊಳ್ಳದೆ ಆಭರಣವಾಗಿ ಪರಿಣಮಿಸುವುದು. ಪ್ರಕೃತ ಎರಡನೆಯ ಪರಿಣಾಮವು ಇಲ್ಲಿ ಸ್ವೀಕೃತವಾಗಿದೆ.

ನಾದೋ ಬಿಂದುಸ್ಸಕಲಃ[1]
ಸಾದಾಖ್ಯಂ[2] ತತ್ತ್ವಮಾಶ್ರಿತೌ ಕಥಿತೌ ||
ವಿದ್ಯೇಶಾಃ ಪುನರೈಶೇ[3]
ಮಂತ್ರಾವಿದ್ಯಾಶ್ಚ ವಿದ್ಯಾಖ್ಯೇ ||೧೧|| (೩೧)

(ಸಕಲಃ) ಸ್ಥೂಲವಾಗಿರುವ (ಬಿಂದುಃ) ಬಿಂದು ಮತ್ತು ಸ್ಥೂಲಧ್ವನಿ ರೂಪವಾದ (ನಾದಃ) ನಾದ ಇವೆರಡು (ಸಾದಾಖ್ಯಂ ತತ್ತ್ವಂ) ಸದಾಶಿವ ತತ್ತ್ವವನ್ನು (ಆಶ್ರಿತೌ) ಆಶ್ರಯಿಸಿಕೊಂಡಿವೆ ಎಂದು (ಕಥಿತೌ) ಹೇಳಲ್ಪಟ್ಟವು. (ವಿದ್ಯೇಶಾಃ ಪುನಃ) ಅನಂತ, ಸೂಕ್ಷ್ಮ, ಶಿವೋತ್ತಮ, ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ, ಶಿಖಂಡಿಗಳೆಂಬ ವಿದ್ಯೇಶ್ವರರು (ಈಶೇ) ಈಶ್ವರತತ್ತ್ವದಲ್ಲಿ ಇದ್ದಾರೆ. (ಮಂತ್ರಾಃ) ಸಪ್ತಕೋಟಿ ಮಹಾ ಮಂತ್ರಗಳೂ, (ವಿದ್ಯಾಶ್ಚ) ಕಾಮಿಕಾದಿ ಆಗಮಗಳೂ ಕೂಡ (ವಿದ್ಯಾಖ್ಯೇ) ವಿದ್ಯಾತತ್ತ್ವದಲ್ಲಿವೆ.

ವಿಚಾರ:—ಪರಬಿಂದುವೆನಿಸಿದ ಶಿವತತ್ತ್ವದದೆಶೆಯಿಂದ ಅದರ ಕಾರ್ಯ ವೆನಿಸಿದ ಸೂಕ್ಷ್ಮನಾದವು ಶಕ್ತಿತತ್ತ್ವದಲ್ಲಿ ಅಡಗಿರುವುದರಿಂದ 'ಸಕಲಬಿಂದು' ಎಂದರೆ ಅಕ್ಷರ ಬಿಂದು ರೂಪವಾದ ಮತ್ತು ಸ್ಥೂಲಧ್ವನಿ ರೂಪನಾದಗಳು ಸದಾಶಿವ ತತ್ತ್ವದಲ್ಲಿ ಅಡಗಿದವು. ವಿದ್ಯೇಶ ಅನಂತಾದಿಗಳು ಈಶ್ವರತತ್ತ್ವ ದಲ್ಲಿ ಅಡಗಿದರು. ಮಂತ್ರಗಳು ಮತ್ತು ವಾಚಕಶಬ್ದಗಳೂ ಸಹ ವ್ಯೋಮ ವ್ಯಾಪಕವಾದ ಎಲ್ಲ ವಿದ್ಯೆಗಳೂ ಕಾಮಿಕಾದಿ ಆಗಮಗಳೂ ಕೂಡ ವಿದ್ಯಾ ತತ್ತ್ವದಲ್ಲಿ ಅಡಗಿದವು.

ಪಂಚಾನಾಮಪ್ಯೇಷಾಂ ನ ಹಿ
ಕ್ರಮೋಽಸ್ತೀಹ ಕಾಲರಹಿತತ್ವಾತ್ |
ವ್ಯಾಪಾರವಶಾದೇಷಾಂ
ವಿಹಿತಾ ಖಲು ಕಲ್ಪನಾ ಶಾಸ್ತ್ರೇ* ||೧೨|| (೩೨)

---

[1] ಸಕಲೌ (ಗ) [2]ಸಾದಾಶಿವಂ (ಗ) [3]ಪುನರೀಶೇ (ಗ)
* ಸೂಚನೆ—ಈ ಕಾರಿಕೆಯು (ಕ, ಗ) ಪ್ರತಿಗಳಲ್ಲಿ ಮಾತ್ರ ಇದೆ. ಕೆಲವರು ಇದನ್ನು ಪ್ರಕ್ಷಿಪ್ತವೆಂದು ಹೇಳುತ್ತಾರೆ (ಸಂ)

(ಏಷಾಂ) ಈ ಹಿಂದೆ ಹೇಳಿದ (ಪಂಚಾನಾಮಪಿ) ಶಿವಾದಿ ಪಂಚತತ್ತ್ವಗಳಲ್ಲಿಯೂ ಕೂಡ (ಕಾಲರಾಹಿತ್ಯಾತ್) ಪೂರ್ವಾಪರ ಕಾಲವನ್ನು ಹೇಳದಿದ್ದುದರಿಂದ (ಇಹ) ಇವುಗಳಲ್ಲಿ (ಕ್ರಮಃ ನ ಹಿ ಅಸ್ತಿ) ಕ್ರಮವೆಂಬುದಿಲ್ಲ. (ಏಷಾಂ) ಇವುಗಳ (ವ್ಯಾಪಾರವಶಾತ್) ಸೃಷ್ಟ್ಯಾದಿ ವ್ಯಾಪಾರವನ್ನು ಕಂಡು (ಶಾಸ್ತ್ರೇ) ಶಾಸ್ತ್ರದಲ್ಲಿ (ಕಲ್ಪನಾ) ಪೂರ್ವಾಪರಕ್ರಮವು (ವಿಹಿತಾಖಲು) ವ್ಯವಸ್ಥೆ ಮಾಡಿದೆಯಷ್ಟೆ.

ಪರಶಿವನಿಗೆ ಸದಾಶಿವಾದಿ ಭೇದವು ಶಾಸ್ತ್ರಗಳಲ್ಲಿ ಶೃತವಾಗಿದೆ. ಆ ಭೇದವು ಪರಮಾರ್ಥವೊ ? ಉಪಚಾರವೊ ? ಎಂಬ ಸಂದೇಹ ಮೂಡಿದರೆ ಅದು ಔಪಚಾರಿಕವೆಂದು ಹೇಳುತ್ತಾನೆ.

ತತ್ತ್ವಂ ವಸ್ತುತ ಏಕಂ
ಶಿವಸಂಜ್ಞಂ ಚಿತ್ರಶಕ್ತಿಶತಖಚಿತಮ್ ।
ಶಕ್ತಿ ವ್ಯಾಪೃತಿ[1]ಭೇದಾತ್
ತಸ್ಯೈತೇ ಕಲ್ಪಿತಾ ಭೇದಾಃ ॥೧೩॥ (೩೩)

(ಶಿವಸಂಜ್ಞಂ) ಪರಶಿವನೆಂಬ ಹೆಸರುಳ್ಳ (ತತ್ತ್ವಂ) ಅಧಿಷ್ಠಾತೃವಾಗಿರುವ ತತ್ತ್ವವು (ವಸ್ತುತಃ) ಪರಮಾರ್ಥದಿಂದ (ಏಕಂ) ಒಂದು. ಏಕೆಂದರೆ ಚೇತನನಿಗೆ ಜಡಕ್ಕೆ ಇರುವಂತೆ ನಾನಾ ರೂಪತ್ವವು ಸಂಭವಿಸುವುದಿಲ್ಲ. ಆದ್ದರಿಂದ (ಚಿತ್ರಶಕ್ತಿ ಶತಖಚಿತಂ) ಅದು ಉಪಾಧಿಯಿಂದ ನಾನಾ ಪ್ರಕಾರವಾಗಿರುವ ವಾಮ ಮೊದಲಾದ ಭೇದವುಳ್ಳ ಶಕ್ತಿಯೊಡನೆ ಸಮವೇತವಾಗಿದೆ. (ತಸ್ಯ) ಆ ಪರಶಿವತತ್ತ್ವಕ್ಕೆ (ಶಕ್ತಿವ್ಯಾಪೃತಿ ಭೇದಾತ್) ತನ್ನ ಜ್ಞಾನ ಕ್ರಿಯಾರೂಪವಾದ ಶಕ್ತಿಯ ಜ್ಞೇಯ–ಕರ್ತವ್ಯವೆಂಬ ವ್ಯಾಪಾರ ಭೇದದಿಂದ (ಏತೇ ಭೇದಾಃ) ಈ ಸದಾಶಿವಾದಿ ಭೇದಗಳು (ಕಲ್ಪಿತಾಃ) ಕಲ್ಪಿಸಲ್ಪಟ್ಟವೆ.

ವಿಚಾರ:—ವಾಸ್ತವವಾಗಿ ಅಧಿಷ್ಠಾತೃವಾದ ಪರಶಿವತತ್ತ್ವವು ಒಂದು. ಅದು ಕರ್ತೃವಾದ್ದರಿಂದ ಅದಕ್ಕೆ ಚೈತನ್ಯವಿದೆ. ಚೈತನ್ಯಕ್ಕೆ ವಿಕಾರಿತ್ವವಿಲ್ಲ. ಅದು 'ಚಿತ್ರಶಕ್ತಿಶತ ಖಚಿತ' ಎಂದರೆ ಈ ಶಕ್ತಿಗೆ ಜ್ಞೇಯ ಕಾರ್ಯಗಳು ಅನಂತ. ಅಂಥ ಔಪಾಧಿಕ ಅನಂತ ಭೇದಗಳಿಂದ ಬೇರೆ ಬೇರೆಯಾದ ಶಕ್ತಿ

---

[1] ವ್ಯಾಪೃತಿಕ

ಗಳಿಂದ ಅದು ಕೂಡಿದೆ. ಆದ್ದರಿಂದ ಆ ಪರಶಿವತತ್ತ್ವಕ್ಕೆ ಶಕ್ತಿವ್ಯಾಪಾರ ಭೇದದಿಂದ ಔಪಚಾರಿಕವಾಗಿ ಸದಾಶಿವಾದಿ ಭೇದವು ಕಲ್ಪಿತವಾಗಿದೆಯೇ ಹೊರತು ಅದು ಪರಮಾರ್ಥವಲ್ಲ. "ಕಿಂತು ಯಃ ಪತಿಭೇದೋಽಸ್ಮಿನ್ ಸ ಶಾಸ್ತ್ರೇ ಶಕ್ತಿ ಭೇದತಃ। ಕೃತ್ಯಭೇದೋಪಚಾರೇಣ ತಥ್ಭೇದ ಸ್ಥಾನ ಭೇದತಃ ॥" ಎಂಬ ಉಕ್ತಿ ಇದನ್ನು ಸಮರ್ಥಿಸುತ್ತದೆ. "ಲಯಾದಿ ಭೇದಃ ಪ್ರಾಗುಕ್ತೋ ಯದುಪಾಧೌ ಶಿವಸ್ಯತು। ಸ ಬಿಂದುರಿತಿ ಮಂತವ್ಯಃ ಸೈವ ಕುಂಡಲಿನೀ ಮತಾ ॥" ಎಂಬಂತೆ ಸದಾಶಿವಾದಿ ಆಕಾರ ಕಲ್ಪನೆಯೂ ಸಹ ಕೇವಲ ಅವನ ಧ್ಯಾನಕ್ಕಾಗಿಯೇ ಹೊರತು ಪರಮಾರ್ಥವಲ್ಲ. ಪೌಷ್ಕರದಲ್ಲಿ 'ಸಾಧಕಸ್ಯತು ಲಕ್ಷ್ಯಾರ್ಥಂ ತಸ್ಯರೂಪಮುದಾಹೃತಮ್ ॥" ಎಂದೂ, ಮೃಗೇಂದ್ರದಲ್ಲಿ ವಪುಷೋ ವಿದ್ಯಮಾನತ್ವಾದ್ಯದ್ಯತ್ಕೃತ್ಯಂ ಕರೋತಿ ಸಃ। ತತ್ರತತ್ರಾಸ್ಯ ಕರ್ತೃತ್ವಂ ವಪುಷಾನುಕೃತಂ ವಪುಃ ॥ ಎಂದೂ ಹೇಳಿದೆ.

ಪರಶಿವನು ಏತಕ್ಕೋಸ್ಕರ ಉಪಚಾರದಿಂದ ಸದಾಶಿವಾದಿ ರೂಪಗಳನ್ನು ಹೊಂದುವನೆಂದರೆ ಜೀವಾತ್ಮರನ್ನು ಅನುಗ್ರಹಿಸುವುದಕ್ಕಾಗಿ ಎಂದು ಹೇಳುತ್ತಾನೆ.

ಚಿದಚಿದನುಗ್ರಹ ಹೇತೋ-
ರೂಪಾಣ್ಯೇತಾನಿ ಸ ಪ್ರಭುಃ ಕೃತ್ವಾ।
ಕುರುತೇ ಚಿತಾಮನುಗ್ರಹ-
ಮನಾದಿ ಮಲರುದ್ಧ ಶಕ್ತೀನಾಮ್ ॥೧೪॥ (೩೪)

(ಸಪ್ರಭುಃ) ಆ ಮಹೇಶ್ವರನು (ಚಿದಚಿದನುಗ್ರಹಹೇತೋಃ) ಚಿತ್ತು ಮತ್ತು ಅಚಿತ್ತುಗಳ ಅನುಗ್ರಹಕ್ಕಾಗಿ (ಏತಾನಿ ರೂಪಾಣಿ) ಈ ಸದಾಶಿವ ಮೊದಲಾದ ಆಕಾರಗಳನ್ನು (ಕೃತ್ವಾ) ಮಾಡಿ (ಅನಾದಿಮಲರುದ್ಧಶಕ್ತೀನಾಂ) ಅನಾದಿ ಮಲದಿಂದ ತಡೆಯಲ್ಪಟ್ಟ ಸಾಮರ್ಥ್ಯವುಳ್ಳ (ಚಿತಾಂ) ಆತ್ಮರಿಗೆ (ಅನುಗ್ರಹಂ) ಮೋಕ್ಷ ರೂಪ ಅನುಗ್ರಹವನ್ನು (ಕುರುತೇ) ಮಾಡುತ್ತಾನೆ.

ವಿಚಾರ:—ಪರಮೇಶ್ವರನು ಚಿದಚಿತ್ತುಗಳನ್ನು ಅನುಗ್ರಹಿಸ ಲಿಕ್ಕಾಗಿಯೇ ಸದಾಶಿವ ಮೊದಲಾದ ಧ್ಯೇಯಾಕಾರಗಳನ್ನು ಹೊಂದುತ್ತಾನೆ.

ಅಲ್ಲಿದ್ದುಕೊಂಡು ಅನಾದಿ ಮಲದಿಂದ ತಡೆಯಲ್ಪಟ್ಟ ಜೀವರನ್ನು ಅನುಗ್ರಹಿಸುತ್ತಾನೆ.

ಶಿವಾತ್ಮಕಮಿದಂ ವಿಶ್ವಂ ಶಿವ ಆಧಾರ ಕಾರಣಮ್ ।
ಅಸ್ಯ ಶಕ್ತಿರ್ವಿಪಕ್ತ್ರೀಸ್ಯಾನ್ನಿಯಂತಾ ಚ ಸದಾಶಿವಃ ॥
ಈಶಃ ಕರ್ತಾ ಕಾರಕಶ್ಚ ಶುದ್ಧವಿದ್ಯಾಪ್ರಕಾಶಿಕಾ ।
ಏಭಿರೀಶೋಽನುಗೃಹ್ಣಾತಿ ಕ್ಲೃಪ್ತೈರ್ಭೇದೈಶ್ಚರಾಚರಮ್ ॥

ಚಿದಚಿದ್ವಿಷಯಕವಾದ ಅನುಗ್ರಹಸ್ವರೂಪವನ್ನು ಹೇಳುತ್ತಾನೆ.

ಭುಕ್ತಿಂ ಮುಕ್ತಿಮಣೂನಾಂ
ಸ್ವವ್ಯಾಪಾರೇ ಸಮರ್ಥತಾಧಾನಮ್[1] ।
ಜಡ ವರ್ಗಸ್ಯ ವಿಧತ್ತೇ
ಸರ್ವಾನುಗ್ರಾಹಕಃ ಶಂಭುಃ ॥೧೫॥ (೩೫)

(ಸರ್ವಾನುಗ್ರಾಹಕಃ) ಎಲ್ಲವನ್ನು ಅನುಗ್ರಹಿಸುವ (ಶಂಭುಃ) ಪರಶಿವನು (ಅಣೂನಾಂ) ಜೀವರಿಗೆ (ಭುಕ್ತಿಂ) ಭೋಗವನ್ನು (ಮುಕ್ತಿಂ) ಮೋಕ್ಷವನ್ನೂ (ವಿಧತ್ತೇ) ಕೊಡುತ್ತಾನೆ. (ಜಡವರ್ಗಸ್ಯ) ಜಡಸಮೂಹಕ್ಕೆ (ಸ್ವವ್ಯಾಪಾರೇ) ತಮ್ಮ ಕೆಲಸದಲ್ಲಿ (ಸಮರ್ಥತಾಧಾನಂ) ಸಾಮರ್ಥ್ಯೋತ್ಪಾದನವನ್ನು (ವಿಧತ್ತೇ) ಮಾಡುತ್ತಾನೆ.

ಪರಶಿವನು ಜೀವರಿಗೆ ಭೋಗ-ಮೋಕ್ಷಗಳನ್ನು ಅನುಗ್ರಹಿಸುತ್ತಾನೆ ಎಂದು ಹೇಳಲಾಯಿತು. ಇಲ್ಲಿ ಮೋಕ್ಷವು ದುಃಖನಿವೃತ್ತಿಗೆ ಕಾರಣವಾದ್ದರಿಂದ ಅದು ಅನುಗ್ರಹವಾಗಬಹುದು. ಆದರೆ ಭೋಗವು ಸುಖದುಃಖರೂಪ. ಆದ್ದರಿಂದ ಅದು ಹೇಗೆ ಅನುಗ್ರಹವಾಗುತ್ತದೆ ? ಎಂದರೆ ಹೇಳುತ್ತಾನೆ.

ಚಿದಚಿದನುಗ್ರಹೋಽಯಂ[2]
ಕಿಲ ಯೋ ಮೋಕ್ಷ[3]ಶ್ಶಿವಸಮಾನತಾ ರೂಪಃ ।

---

[1]ಸಮರ್ಥತಾದಾನಂ (ಕ) [2]ಅನುಗ್ರಹೋ ಽಯಂ (ಖ, ಗ) [3]ಯನ್ಮೋಕ್ಷಃ (ಖ)

ಸೋ ನಾದಿತ್ವಾತ್ಕರ್ಮಣ
ಇಹ ಭೋಗಮೃತೇ ನ ಯಾತಿ ಸಂಸಿದ್ಧಿಮ್ ॥೧೬॥ ೩೬

(ಶಿವಸಮಾನತಾ ರೂಪಃ) ಶಿವಸಾಮ್ಯ (ಸಾಮರ್ಥ್ಯ) ರೂಪವಾಗಿರುವ (ಯಃ) ಯಾವ (ಮೋಕ್ಷಃ) ಮೋಕ್ಷವಿದೆಯೋ (ಅಯಂ) ಇದು (ಚಿದ ಚಿದನು ಗ್ರಹಃಕಿಲ) ಜೀವರ ಅನುಗ್ರಹವೆಂಬುದು ಪ್ರಸಿದ್ಧವಷ್ಟೆ! (ಸಃ) ಆ ಮೋಕ್ಷವು [ಇಹ] ಇಲ್ಲಿ [ಕರ್ಮಣಃ ಅನಾದಿತ್ವಾತ್] ಕರ್ಮವು ಅನಾದಿ ಯಾದ್ದರಿಂದ [ಭೋಗಮೃತೇ] ಭೋಗವಿಲ್ಲದೆಯೇ [ಸಂಸಿದ್ಧಿಂ] ಅಭಿವ್ಯಕ್ತಿ ಯನ್ನು [ನಯಾತಿ] ಹೊಂದುವುದಿಲ್ಲ.

ವಿಚಾರ—ಸಂದೇಹ:—ನಿತ್ಯ ನಿರತಿಶಯ ಆನಂದವಿರುವಾಗ ವಿಷಮಿಶ್ರ ವಾದ ಮಧುರ ಅನ್ನದಂತೆ ಸುಖಲೇಶವುಳ್ಳ ಈ ಭೋಗವನ್ನು ಕೊಡುವುದು ಹೇಗೆ ಅನುಗ್ರಹವಾದೀತು?

ಸಮಾಧಾನ:—ಸುಖವು ಲೇಶವೇ ನಿಜ. ಆದರೆ ಅದು ನಿತ್ಯಸುಖದಲ್ಲಿ ಆಸಕ್ತಿಯನ್ನು ಉಂಟು ಮಾಡುವುದರ ಮೂಲಕ ಮುಕ್ತಿಗೆ ಕಾರಣ ವಾಗುತ್ತದೆ. ಅದರಂತೆ ದುಃಖವೂ ಕೂಡ ಸಂಸಾರದಲ್ಲಿ ಜಿಹಾಸೆಯನ್ನು ಹುಟ್ಟಿಸಿ ವೈರಾಗ್ಯಮೂಡಿಸುವುದರ ಮೂಲಕ ಮುಕ್ತಿಗೆ ಕಾರಣವಾಗುತ್ತದೆ.

ಆದರೂ ಸರ್ವಗ್ರಾಹಕತ್ವವು ಹೇಗೆ ಸಿದ್ಧಿಸುತ್ತದೆ? ಎಂದರೆ ದುಷ್ಟರನ್ನು ನಿಗ್ರಹಿಸುವುದೂ ಕೂಡ ಅವರಲ್ಲಿರುವ ದೋಷವನ್ನು ಕಳೆವು ದಕ್ಕಾಗಿಯೇ. ಶಿವನಿಂದೆ, ಗುರುನಿಂದೆ ಮುಂತಾದ ಪಾಪಗಳು ಒಂದು ದೃಷ್ಟಿ ಯಿಂದಪಾಪ ಕರವೆ! ಆದರೆ ಅಂಥವರು ಆಯಾ ಪಾಪದ ಫಲವಾಗಿ ಯಮ ದಂಡನೆಗೆ ಸಿಕ್ಕಿ ಶುದ್ಧಾತ್ಮರಾಗಿ ಮುಂದೆ ಉತ್ತಮರಾಗುವ ಸಂಭವ ವಿರುವು ದರಿಂದ ಆ ದೋಷಗಳು ಆಯಾ ವ್ಯಕ್ತಿಯ ಉದ್ಧಾರಕ್ಕೆ ಕಾರಣವಾಗುತ್ತವೆ.

ನಿಗ್ರಹೋಽಪಿ ಸ್ವರೂಪೇಣ ವಿದುಷಾಂ ನ ಜಿಗುಪ್ಸಿತಃ ।
ಅತ ಏವ ಹಿ ದಂಡ್ಯೇಷು ದಂಡೋ ರಾಜ್ಞಾಂ ಪ್ರಶಸ್ಯತೇ ॥
ಸರ್ವೋಽಪಿ ನಿಗ್ರಹೋ ಲೋಕೇ ನ ಚ ವಿದ್ವೇಷ ಪೂರ್ವಕಃ ।
ನ ಹಿ ದ್ವೇಷ್ಟಿ ಪಿತಾ ಪುತ್ರಂ ಯೋ ನಿಗೃಹ್ಯಾಪಿ ಶಿಕ್ಷಯೇತ್ ॥
ನಿದಾನಜ್ಞಸ್ಯ ಭಿಷಜೋ ರುಗ್ಣೇ ಹಿಂಸಾಂ ಪ್ರಯುಂಜತಃ ।
ನ ಕಿಂಚಿದಪಿ [illegible] ॥

ಎಂದು ವಾಯವೀಯದಲ್ಲಿ ಶಿವನ ಸರ್ವಾನುಗ್ರಾಹಕತ್ವವನ್ನು ಸಮರ್ಥಿಸಲಾಗಿದೆ.

ಪಾಶಗಳನ್ನು ಬಿಡಿಸಿ, ಸಮಸ್ತ ಜೀವಿಗಳಲ್ಲಿ ಜ್ಞಾನಕ್ರಿಯಾರೂಪವಾದ ಶಿವತ್ವವನ್ನು ಪ್ರಕಟಿಸುವ ಮೋಕ್ಷಕ್ಕೇ ಮುಖ್ಯವಾಗಿ 'ಅನುಗ್ರಹ' ಎಂಬುದು ಅನ್ವಯಿಸುತ್ತದೆ. ಭೋಗವು ಮಾತ್ರ 'ನಾಽಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿ ಶತೈರಪಿ' ಎಂಬ ಉಕ್ತಿಯಂತೆ ಫಲ ಭೋಗದಮೂಲಕ ಕರ್ಮ ಕ್ಷಯಕ್ಕೆ ಕಾರಣವಾದುದರಿಂದ ಅದೂ ಪರಂಪರೆಯಿಂದ ಮೋಕ್ಷಕ್ಕೆ ಸಾಧಕ ವಾಗುತ್ತದೆ. ಆದ್ದರಿಂದ ಭೋಗಕ್ಕೂ ಮೋಕ್ಷವೆಂದು ಹೇಳಿದೆ.

ಇದರಂತೆ ಪಾಶಾನುಗ್ರಹವೂ ಕೂಡ ಭೋಗಾನುಭವದಮೂಲಕ ಪಶು ಅನು ಗ್ರಹಕ್ಕಾಗಿಯೇ ಎಂದು ಹೇಳುತ್ತಾನೆ.

ತೇನ ವಿಭುಸ್ತದ್ಭುಕ್ತ್ಯೈ
ಕುರುತೇ ತನು ಕರಣ ಭುವನನಿಷ್ಪತ್ತಿಮ್ ।
ಕರ್ತ್ರಾ ವಿನಾ ನ ಕಾರ್ಯಂ
ನ ತಥೋಪಾದಾನ ಕರಣಾಭ್ಯಾಮ್ ॥೧೭॥ ೩೭

[ತೇನ] ಕರ್ಮವು ಅನುಭವಿಸಿದಲ್ಲದೆ ಹಿಂಗದಾದ್ದರಿಂದ [ವಿಭುಃ] ಪರಶಿವನು [ತದ್ಭುಕ್ತ್ಯೈ] ಆ ಕರ್ಮವನ್ನು ಅನುಭವಿಸಲು (ತನುಕರಣ ಭುವನನಿಷ್ಪತ್ತಿಂ) ಸೂಕ್ಷ್ಮಶರೀರ ಮತ್ತು ಭುವನಜ ದೇಹಗಳ ಉತ್ಪತ್ತಿ ಯನ್ನು [ಕುರುತೇ] ಮಾಡುತ್ತಾನೆ. [ಕರ್ತ್ರಾ ವಿನಾ] ಕರ್ತೃವಿಲ್ಲದೆ [ಕಾರ್ಯಂ ನ] ಕಾರ್ಯವಿಲ್ಲ. [ತಥಾ] ಹಾಗೆಯೇ. [ಉಪಾದಾನ ಕಾರಣಾ ಭ್ಯಾಂ] ಉಪಾದಾನ ಕಾರಣಗಳಿಲ್ಲದೆ (ಕಾರ್ಯಂನ) ಕಾರ್ಯವಿಲ್ಲ.

ವಿಚಾರ:—ಒಟ್ಟಿನಲ್ಲಿ 'ತನು-ಶರೀರ' ಶರೀರವು ಸೂಕ್ಷ್ಮ ಮತ್ತು ಸ್ಥೂಲ ಎಂದು ಎರಡು ವಿಧ. 'ಕರಣ-ಇಂದ್ರಿಯ' ಬಾಹ್ಯಕರಣವು ಕರ್ಮೇಂದ್ರಿಯ ಮತ್ತು ಜ್ಞಾನೇಂದ್ರಿಯ ಎಂದು ಹತ್ತುವಿಧ. ಅಂತಃ ಕರಣವು ಮನಸ್ಸು; ಅಹಂಕಾರ ಮತ್ತು ಚಿತ್ತ ಎಂದು ಮೂರು ವಿಧ. 'ಭುವನ-೩೪ ಲೋಕಗಳು' ಇವೆಲ್ಲವನ್ನು ಮಾಹೇಶ್ವರನು ಜೀವಿಗಳ ಭೋಗಕ್ಕಾಗಿ ಸೃಷ್ಟಿಸುತ್ತಾನೆ.

'ತನು-ಕರಣ' ಶಬ್ದದಿಂದ ಅಸಾಧಾರಣವಾದ ಸೂಕ್ಷ್ಮಶರೀರ ಸೃಷ್ಟಿಯೂ 'ಭುವನನಿಷ್ಪತ್ತಿ' ಎಂಬುದರಿಂದ ಸಾಧಾರಣ ಭುವನಮುಂತಾದ ಮತ್ತು ಸಾಧಾರಣಾಸಾಧಾರಣ ಭುವನಜಶರೀರಾತ್ಮಕ ಸೃಷ್ಟಿಯೂ ಹೇಳಲ್ಪಟ್ಟಿದೆ. ಇವೆಲ್ಲ ಅನಂತಾದಿಗಳ ಮೂಲಕ ಮಾಡುತ್ತಾನೆ ಎಂದು ಅರ್ಥ. ಏಕೆಂದರೆ ಕರ್ತೃವಿಲ್ಲದೆ. ಉತ್ಪತ್ತಿ ಯಾಗುವುದಿಲ್ಲ; ಮಾತ್ರವಲ್ಲ, ಅದರಂತೆ ಉಪಾದಾನಕಾರಣವಿಲ್ಲದಿದ್ದರೂ ತನುಕರಣ ಮುಂತಾದ ಅಶುದ್ಧ ಸೃಷ್ಟಿಯಾಗುವುದಿಲ್ಲವೆಂದು ತಾತ್ಪರ್ಯ.

ತತ್ತ್ವಪ್ರಕಾಶಿಕೆಯಲ್ಲಿ ಶುದ್ಧವರ್ಗನಿರ್ಣಯವೆಂಬ
ದ್ವಿತೀಯ ಪರಿಚ್ಛೇದವು ಮುಗಿದುದು.

## ತೃತೀಯ ಪರಿಚ್ಛೇದ

ಈ ಸೃಷ್ಟಿಯಲ್ಲಿ ಉಪಾದಾನವು ಯಾವುದು ? ಕರಣವು ಯಾವುದು ? ಎಂದರೆ ಸಿದ್ಧಾಂತವನ್ನು ಹೇಳುತ್ತಾನೆ.

ಶಕ್ತಯ ಇಹಾಸ್ಯ ಕರಣಂ
ಮಾಯೋಪಾದಾನ ಮಿಷ್ಯತೇ ಸೂಕ್ಷ್ಮಾ ।
ಏಕಾ ನಿತ್ಯಾ ವ್ಯಾಪಿ-
ನ್ಯನಾದಿನಿಧನಾ ಶಿವಾಸಕ್ತಾ ॥೧॥ (೩೮)

(ಇಹ) ಈಕಾರ್ಯದಲ್ಲಿ [ಅಸ್ಯ] ಈ ಶಿವನಿಗೆ [ಶಕ್ತಯಃ] ಶಕ್ತಿಗಳು [ಕರಣಂ] ಸಾಧನವು [ಸೂಕ್ಷ್ಮಾ] ಅಮೂರ್ತವಾಗಿರುವ [ಮಾಯಾ] ಮಾಯೆಯು [ಉಪಾದಾನಂ] ಉಪಾದಾನವಾಗಿ [ಇಷ್ಯತೇ] ಅಪೇಕ್ಷಿಸಲ್ಪಡುತ್ತದೆ. ಆ ಮಾಯೆಯ ಸ್ವರೂಪವು ಎಂತಹದು ಎಂದರೆ [ಏಕಾ] ಒಂದೇ ಆಗಿರುವ ಆ ಮಾಯೆಯು [ನಿತ್ಯಾ] ಕೇಡಿಲ್ಲದುದು. [ವ್ಯಾಪಿನೀ] ತನ್ನ ಕಲಾದಿಕಾರ್ಯಕ್ಕೆ ವ್ಯಾಪಕವಾಗಿದೆ. [ಅನಾದಿನಿಧನಾ] ತನಗೆ ಎಂದೂ ಕೇಡಿಲ್ಲದುದು [ಶಿವಾಸಕ್ತಾ] ಶಿವೇ ಅಸಕ್ತಾ ಎಂದು ಬಿಡಿಸಬೇಕು. ಎಂದರೆ ಶಿವನಲ್ಲಿ ಸಮವೇತವಾಗಿಲ್ಲದಿರುವುದು. ಎಂದರೆ ತಾನು ಉಪಾದಾನ ಕಾರಣವಾದ್ದರಿಂದ ಬಿಂದುವಿನಂತೆ ಪರಿಗ್ರಹ ಶಕ್ತಿಯಾಗಿರುವುದರಿಂದ ಶಿವನಲ್ಲಿ ಬೆರೆದಿರುವುದಿಲ್ಲ.

ವಿಚಾರಃ—ಹಿಂದೆ ಹೇಳಿದಂತೆ ಉಪಾಧಿಭೇದದಿಂದ ಭಿನ್ನವಾಗುವ ಆ ಶಕ್ತಿಯೇ ಈ ಅಶುದ್ಧಾಧ್ವದಲ್ಲಿಯೂ ಕೂಡ ಕರಣವೆನಿಸಿದೆ. ಉಪಾದಾನ ರೂಪವಾದ ಆ ಮಾಯೆಯು ಅಮೂರ್ತವಾದ್ದರಿಂದ ಸೂಕ್ಷ್ಮ. ಪರಮಕಾರಣ

ವಾದ್ದರಿಂದಲೂ ಶಕ್ತಿರೂಪವಾದ್ದರಿಂದಲೂ ಅದು ಒಂದು. ಸೃಷ್ಟಿ-ಸಂಹಾರ ಪ್ರಬಂಧಕ್ಕೆ ಆದ್ಯಂತವಿಲ್ಲದ್ದರಿಂದ ಅದು ನಿತ್ಯ. ಆ ಶಕ್ತಿಯೂ ಆದ್ಯಂತವಿರಹ ವಾದ್ದರಿಂದ ಅದು ವ್ಯಾಪಿನೀ; ಎಂದರೆ ಕಲಾದಿಸರ್ವಕಾರ್ಯವನ್ನೂ ವ್ಯಾಪಿಸಿಕೊಂಡಿದೆ. ಉತ್ಪತ್ತಿವಿನಾಶಗಳಿಲ್ಲದ್ದರಿಂದ ಅನಾದಿನಿಧನ. ಅಭಿ ಪ್ರಾಯವಿಷ್ಟು-ಪರಾಶಕ್ತಿಯ ವಿಕಾರಗಳೇ ಇಚ್ಛಾಮೊದಲಾದ ಶಕ್ತಿಗಳು. ಈ ಶಕ್ತಿಗಳು ಪರಮೇಶ್ವರನಿಗೆ ಕರಣ. ಎಂದರೆ ಹಸ್ತ ಮೊದಲಾದವು ಇದ್ದಂತೆ. 'ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿ ಯಾ ಚ" ಎಂಬ ಶ್ರುತಿಯಿಂದ ಈ ಅಂಶವು ಸಿದ್ಧವಾಗುತ್ತದೆ. ಘಟನಿರ್ಮಾಣ ದಲ್ಲಿಮಣ್ಣು, ಪಟನಿರ್ಮಾಣದಲ್ಲಿ ತಂತುಗಳು ಉಪಾದಾನವಾಗುವಂತೆ ವಿಶ್ವ ನಿರ್ಮಾಣದಲ್ಲಿ ಮಾಯೆ ಉಪಾದಾನ ಕಾರಣ. 'ಮಾಯಾಂತು ಪ್ರಕೃತಿಂ ವಿದ್ಯಾತ್' ಎಂಬ ಶ್ರುತಿ ಇದನ್ನು ಸಮರ್ಥಿಸುತ್ತದೆ.

ಮಾಯೆ ಸೂಕ್ಷ್ಮವಾದ್ದರಿಂದ ಅದು ಘಟಾದಿಗಳಂತೆ ತೋರುವುದಿಲ್ಲ ವಾದರೂ ಜಗತ್ತಿನ ಉತ್ಪತ್ತಿಗೆ ಕಾರಣವಾದ್ದರಿಂದ ಅದರ ಅಸ್ತಿತ್ವವು ಸಿದ್ಧವಾಗುತ್ತದೆ.

"ಏತೇಷಾಮೇವ ಪಾಶಾನಾಂ ಮಾಯಾ ಕಾರಣಮುಚ್ಯತೇ" "ಮೂಲ ಪ್ರಕೃತಿರವ್ಯಕ್ತಾ" ಎಂದು ಹೇಳಿರುವುದರಿಂದ ಅದುಪ್ರಕೃತಿ.

ಸಾಧಾರಣೀ ನರಾಣಾಂ[1]
ಕಾರಣಮಪಿ ಜೇಯಮಖಿಲಭುವನಾನಾಮ್ ।
ನಿಖಿಲಜನಕರ್ಮ
ಖಚಿತಾ ಸ್ವಭಾವತೋ ಮೋಹಸಜ್ಜನನೀ ॥೨॥
[೩೯]

(ಇಯಂ) ಈ ಮಾಯೆಯು (ನರಾಣಾಂ) ಮಾನವರಿಗೆ (ಸಾಧಾರಣೀ) ಸಾಮಾನ್ಯವಾಗಿದೆ. [ಅಖಿಲಭುವನಾನಾಂ] ಸಮಸ್ತ ಲೋಕಗಳಿಗೆ(ಕಾರಣಂ)

---

[1] ಚ ಪುಂಸಾಂ (ಗ)

ಕಾರಣ. (ಅಪಿಚ) ಮತ್ತು [ನಿಖಿಲಜನಕರ್ಮಖಚಿತಾ] ಸಮಸ್ತ ಜನರ ಕರ್ಮಗಳೊಡನೆ ಕೂಡಿದೆ. ಹೇಗೆಂದರೆ ಕರ್ಮಸಂಸ್ಕಾರಗಳು ಬುದ್ಧಿಯ ಗುಣಗಳು. ಪ್ರಳಯದಲ್ಲಿ ಬುದ್ಧಿಯು ಮಾಯೆಯಲ್ಲಿ ಅಡಗುತ್ತದೆ. ಆದ್ದರಿಂದ ಕರ್ಮಗಳೊಡನೆ ಮಾಯೆ ಕೂಡಿಕೊಂಡಿದೆ ಎಂದು ತಾತ್ಪರ್ಯ. [ಸ್ವಭಾವತಃ] ಸ್ವಭಾವವಾಗಿ [ಮೋಹಸಂಜನನೀ] ಮೋಹವನ್ನು ಹುಟ್ಟಿಸುವುದು. ಹೇಗೆಂದರೆ ಅನಿತ್ಯ, ಅಶುಚಿ, ದುಃಖಾತ್ಮಕ ಮತ್ತು ಅನಾತ್ಮಕವೂ ಆದ ದೇಹೇಂದ್ರಿಯಾದಿಗಳಲ್ಲಿ ನಿತ್ಯ, ಶುಚಿ, ಸುಖಿ,ಮತ್ತು ಆತ್ಮ ಎಂಬ ಭ್ರಮೆಯನ್ನು ಹುಟ್ಟಿಸುವುದರಿಂದ ಈ ಮಾಯೆಯೂ ಮೋಹಜನನೀ ಎನಿಸಿಕೊಂಡಿದೆ.

ಮಾಯೆ ಸಕಲ ಜೀವರಿಗೂ ಸಮಾನ. ಏಕೆಂದರೆ ಅದು ಸಮಸ್ತ ಜಂತುಗಳ ಶರೀರ, ಇಂದ್ರಿಯ ಮತ್ತು ವಿಷಯರೂಪವಾಗಿ ಪರಿಣಾಮ ಹೊಂದಿ ಎಲ್ಲ ಪುರುಷರಿಗೂ ಉಪಭೋಗ್ಯವಾಗುತ್ತದೆ.

ಸಂದೇಹ:—ಸರ್ವಪುರುಷಸಾಧಾರಣ ಎಂದರೆ ಮುಕ್ತಾತ್ಮರಿಗೂ ಮಾಯೆಯುಂಟೆ ? ಹಾಗಿದ್ದರೆ ಅವನಿಗೂ ಶರೀರಾದಿಗಳು ಉಂಟಾಗಬೇಕಾದೀತು !

ಸಮಾಧಾನ:—ಹಾಗಲ್ಲ, ಮಾಯೆಗೆ 'ನಿಖಿಲಜನಕರ್ಮಖಚಿತ' ಎಂಬ ವಿಶೇಷಣವಿದೆ. ಆದ್ದರಿಂದ ಮುಕ್ತಾತ್ಮರಿಗೆ ಕರ್ಮವಿಲ್ಲ. ಆದಕ್ಕಾಗಿಯೇ ಅವರಿಗೆ ಅದಕ್ಕೆ ನಿಮಿತ್ತವಾದ ಶರೀರಾದಿಗಳೂ ಇಲ್ಲ.

ಮಾಯೆಗೂ ಷಡಧ್ವವ್ಯಾಪ್ತಿಯುಂಟು.

ಇಂಥ ಅಶುದ್ಧ ಮಾಯೆಯಿಂದ ತತ್ತ್ವಗಳು ಹುಟ್ಟುವ ಪ್ರಕಾರವನ್ನು ಹೇಳುತ್ತಾನೆ.

ಕರ್ಮಾಣ್ಯಪೇಕ್ಷ್ಯ[1] ಶಂಭು
ಮಾಯಾಂ ವಿಕ್ಷೋಭ್ಯ ಶಕ್ತಿಭಿಃ ಸ್ವಾಭಿಃ ।
ಪ್ರತಿಪುರುಷಂ ಭೋಗಾರ್ಥಂ
ವಪೂಂಷಿ ಕರಣಾನಿ ಚಾಧತ್ತೇ ॥೩॥ [೪೦]

---

[1] ಕರ್ಮಾಣ್ಯವೇಕ್ಷ್ಯ (ಗ)

[ಶಂಭುಃ] ಶಿವನು [ಕರ್ಮಾಣಿ] ಜೀವಾತ್ಮರ ಕರ್ಮಗಳನ್ನು [ಅಪೇಕ್ಷ್ಯ] ಪ್ರಳಯದಲ್ಲಿ ಪಕ್ವವಾಗಿರುವುದನ್ನು ನೋಡಿ [ಸ್ವಾಭಿಃ] ತನ್ನ ಶಕ್ತಿಗಳಿಂದ ಅಧಿಷ್ಠಿಸಲ್ಪಟ್ಟ [ಶಕ್ತಿಭಿಃ] ಅನಂತೇಶ್ವರನ ಶಕ್ತಿಗಳಿಂದ [ಮಾಯಾಂ] ಮಾಯೆಯನ್ನು [ವಿಕ್ಷೋಭ್ಯ] ತತ್ತ್ವಗಳನ್ನು ಹುಟ್ಟಿಸಲು ಅಭಿಮುಖಗೊಳಿಸಿ [ಪ್ರತಿಪುರುಷಂ] ಪ್ರತಿಯೊಬ್ಬ ಪುರುಷನನ್ನು ಕುರಿತು [ಭೋಗಾರ್ಥಂ] ಅನುಭವಿಸುವುದಕ್ಕಾಗಿ [ವಪೂಂಷಿ] ಸ್ಥೂಲಶರೀರಗಳನ್ನು [ಕರಣಾನಿಚ] ಸೂಕ್ಷ್ಮಶರೀರಗಳನ್ನು ಸಹ [ಆದತ್ತೇ] ಮಾಡುತ್ತಾನೆ.

ವಿಚಾರ:—ಶಿವನು ಜೀವಿಗಳ ಕರ್ಮಗಳು ಪ್ರಳಯದಲ್ಲಿ ಪಕ್ವವಾಗಿರುವುದನ್ನು ಕಂಡು, ಅವುಗಳನ್ನು ಅನುಭವಿಸಲು ತನ್ನ ಶಕ್ತಿಯಲ್ಲಿ ಅಡಗಿರುವ ಅನಂತ ಶಕ್ತಿಗಳಿಂದ ಮಾಯೆಯನ್ನು ವಿಕ್ಷೋಭ ಗೊಳಿಸುವನು. "ವಾಮಾದಿ ಶಕ್ತಿಭಿರ್ಯುಕ್ತಃ ಶಿವೇಚ್ಛಾವಿಧಿ ಚೋದಿತಃ। ವಿದ್ಯಾರಾಜಾಧಿರಾಜೇಶೋ ಮಾಯಾಂ ವಿಕ್ಷೋಭ್ಯ ಮಂತ್ರರಾಟ್" [ಮೃಗೇಂದ್ರೇ] ಎಂಬ ಮಾತು ಇದನ್ನು ಸಮರ್ಥಿಸುತ್ತದೆ. ತತ್ತ್ವಗಳು ಮಾಯೆಯಿಂದ ಸ್ಥೂಲ ಮತ್ತು ಸೂಕ್ಷ್ಮ ಎಂಬ ಎರಡು ರೂಪವಾಗಿ ಹುಟ್ಟುತ್ತವೆ. ಅವುಗಳಲ್ಲಿ ಸ್ಥೂಲವಾದವುಗಳು ಭುವನಗಳಿಗೆ ಆಧಾರವಾಗುತ್ತವೆ. ಸೂಕ್ಷ್ಮಗಳು ಸೂಕ್ಷ್ಮಶರೀರರೂಪವಾಗಿರುತ್ತವೆ.

ಸೂಕ್ಷ್ಮಶರೀರರೂಪವಾದ ಕಾಲಮೊದಲಾದ ತತ್ತ್ವಗಳ ಉತ್ಪತ್ತಿಯನ್ನು ಮತ್ತು ಅವುಗಳ ಕಾರ್ಯಗಳನ್ನು ಹೇಳುತ್ತಾನೆ.

ನಾನಾವಿಧ ಶಕ್ತಿ ಮಯಿ೧
ಸಾ ಜನಯತಿ೨ ಕಾಲತತ್ತ್ವಮೇವಾದೌ ।
ಭಾವಿ೩ ಭವದ್ಭೂತಮಯಂ
ಕಲಯತಿ ಜಗದೇಷ ಕಾಲೋಽತಃ ॥೪॥ [೪೧]

[ನಾನಾವಿಧಶಕ್ತಿಮಯೀ] ಅನೇಕವಿಧವಾದ ಶಕ್ತಿಸ್ವರೂಪವಾಗಿರುವ (ಸಾ) ಆ ಮಾಯೆಯು (ಆದೌ) ಮೊದಲು(ಕಾಲತತ್ತ್ವಮೇವ) ಕಾಲತತ್ತ್ವ

---

೧ ಮಯೀ (ಗ) ೨ ಸೃಜತಿ (ಹ) (ಗ) ೩ ಭವ (ದ್) ಭೂತರೂಪಂ (ಗ)

ವನ್ನೇ (ಜನಯತಿ) ಹುಟ್ಟಿಸುತ್ತದೆ. (ಇದಂ) ಈ ಕಾಲತತ್ತ್ವವು (ಭಾವಿ) ಆಗುವಂತಹುದು, [ಭವೇತ್] ಆಗುತ್ತಿಹುದು ಮತ್ತು [ಭೂತಂ] ಆದಂತಹುದು ಎಂದು ಮೂರುವಿಧ. [ಏಷಃ] ಈ ಕಾಲವು [ಜಗತ್] ಲೋಕವನ್ನು (ಕಲಯತಿ) ಎಣಿಸುತ್ತದೆ. [ಅತಃ] ಆದ್ದರಿಂದ [ಕಾಲಃ] ಕಾಲ ಎನಿಸಿಕೊಂಡಿದೆ.

ವಿಚಾರ:—ಸತ್ಕಾರ್ಯವಾದಕ್ಕೆ ಅಭಿಮತವಾದ ಈ ಮಾಯೆಯು ಮಹಾಪ್ರಳಯದಲ್ಲಿ ಕಾರ್ಯಗಳು ಶಕ್ತಿರೂಪದಿಂದ ಅಲ್ಲಿ ಸೇರುವುದರಿಂದ ಆದು ಅನಂತನಿಂದ ಕ್ಷೋಭಿಸಲ್ಪಟ್ಟು ಕಾಲತತ್ತ್ವವನ್ನು ಹುಟ್ಟಿಸುತ್ತದೆ. ಇದು ಬಿಂದುವಿನ ಪರಿಣಾಮ. ಆದರೆ ಅದು "ಕ್ಷೀರದಧಿ" ಪರಿಣಾಮದಂತಲ್ಲ. ಸುವರ್ಣಾಭರಣ ಪರಿಣಾಮದಂತೆ.

ಸಂದೇಹ:—ಮತಂಗ ಶ್ರುತಿಯಲ್ಲಿ ಕಲಾ ವಿದ್ಯಾ ರಾಗಗಳ ತರುವಾಯ ಕಾಲತತ್ತ್ವವನ್ನು ಹೇಳಿದೆಯಲ್ಲವೇ ?

ಸಮಾಧಾನ:—ಹೌದು, ಕಾಲಾದಿಗಳಿಗೆ ಮುನ್ಮುಂದಿನ ಪ್ರವೃತ್ತಿಕ್ರಮವನ್ನು ಅಲ್ಲಿ ಹೇಳಿದೆ. ಇಲ್ಲಿ ಸೃಷ್ಟಿಕ್ರಮವನ್ನು ಮಾತ್ರ ಹೇಳಿರುವುದರಿಂದ ವಿರೋಧವಿಲ್ಲ.

ಶಂಕೆ:—ನೈಯಾಯಿಕರು ಕಾಲವನ್ನು ನಿತ್ಯವೆಂದು ಹೇಳಿದ್ದಾರೆ.

ಸಮಾಧಾನ—ನಿಜ, ಆದರೆ ಇದು ವರ್ತಮಾನ–ಭೂತ–ಭವಿಷ್ಯತ್ತೆಂಬ ಮೂರು ವಿಧವಾಗಿದ್ದು ಅಚೇತನವೂ, ಅನೇಕವೂ ಆಗಿರುವುದರಿಂದ ಅನಿತ್ಯ.

ನಿಯತಿರ್ನಿಯಮನರೂಪಾ
    ಮಾಯಾತಃ ಸಾಪ್ಯನಂತರಂ ಭವತಿ ।
ನಿಯಮಯತಿ ಯೇನ ನಿಖಿಲಂ
    ತೇನೇಯಂ ನಿಯತಿರಿತ್ಯುಕ್ತಾ* ॥೫॥ (೪೨)

---

* ನಿಯತಿರುದ್ದಿಷ್ಟಾ (ಗ)

[ನಿಯತಿಃ] ನಿಯತಿಯು [ನಿಯಮನರೂಪಾ] ಎಲ್ಲವನ್ನು ನಿಯಮಿಸುವ ಸ್ವರೂಪವುಳ್ಳದ್ದು. (ಸಾ) ಆ ನಿಯತಿಯು (ಮಾಯಾತಃ) ಮಾಯೆಯ ದೆಸೆಯಿಂದ (ಅನಂತರಂ) ಕಾಲತತ್ತ್ವದ ತರುವಾಯ (ಭವತಿ) ಆಗುತ್ತದೆ. (ಯೇನ) ಯಾವಕಾರಣದಿಂದ (ಇಯಂ) ಈ ನಿಯತಿಯು (ನಿಖಿಲಂ) ಎಲ್ಲವನ್ನೂ (ನಿಯಮಯತಿ) ನಿಯಮಿಸುತ್ತದೆ. (ತೇನ) ಅದರಿಂದ (ನಿಯತಿರಿತಿ) ನಿಯತಿ ಎಂದು (ಉಕ್ತಾ) ಹೇಳಲ್ಪಟ್ಟಿತು.

ವಿಚಾರ—ಅಭಿಪ್ರಾಯವಿಷ್ಟು—ನಿಯತಿ ಎಂಬುದು ಇಲ್ಲದಪಕ್ಷದಲ್ಲಿ ಇತರರು ಆರ್ಜಿಸಿದ ಕರ್ಮವನ್ನೂ ಕೂಡ ಮತ್ತೊಬ್ಬರು ಅನುಭವಿಸಬಹುದು: ಸರ್ಕಾರದ ನಿಯಮವಿಲ್ಲದಿದ್ದರೆ ನಮ್ಮ ಆಸ್ತಿ ಪಾಸ್ತಿಗಳನ್ನು ಕಳ್ಳಕಾರಕರು ಅಪಹರಿಸುವಂತೆ. ಹೀಗೆ 'ನಿಯಾಮಕ' ವಾದ್ದರಿಂದಲೇ ಅದು 'ನಿಯತಿ' ಎನಿಸಿತು. ಆದರೆ ಇಲ್ಲಿ ಕರ್ಮವನ್ನು ನಿಯಾಮಕ ವೆಂದು ಹೇಳಲಾಗುವುದಿಲ್ಲ. ಏಕೆಂದರೆ ಅದು ಫಲವನ್ನು ಉಂಟು ಮಾಡುವುದರಲ್ಲಿಯೇ ಚರಿತಾರ್ಥ ವಾಗುತ್ತದೆ. ಕರ್ಮವು ಫಲವನ್ನುಂಟು ಮಾಡುವುದಲ್ಲದೆ ಆದು ನಿಯಮವನ್ನು ಮಾಡಬೇಕು ಎಂಬುವುದರಲ್ಲಿ ಪ್ರಮಾಣವಿಲ್ಲ. ಹಾಗಾದರೆ ಶಿವ ಶಕ್ತಿಯು ನಿಯಾಮಿಕೆಯಾಗಲಿ ಎಂದರೆ ಹಾಗಾಗುವುದಿಲ್ಲ; ಏಕೆಂದರೆ ಆ ಶಿವ ಶಕ್ತಿಯು ಆಯಾತತ್ತ್ವಗಳ ವ್ಯವಧಾನದಲ್ಲಿಯೇ ಇರುವುದರಿಂದ ಅದು ಭೋಗದವಿಷಯದಲ್ಲಿ ಕಾರ್ಯ ಮಾಡಬೇಕಾಗುತ್ತದೆ. ಹಾಗೆ ಹೇಳುವುದಾದರೆ ಎಲ್ಲವೂ ಶಿವ ಶಕ್ತಿಯಿಂದಲೇ ಆಗುವುದರಿಂದ ಯಾವತತ್ತ್ವಗಳೂ ಬೇಡವೆಂದಾಗುತ್ತದೆ.

ಮಾಯಾತಸ್ತದನುಕಲಾ
ಮಲಂ ನೃಣಾಮೇಕತಸ್ತು ಕಲಯಿತ್ವಾ ।
ವ್ಯಂಜಯತಿ ಕರ್ತೃಶಕ್ತಿಂ
ಕಲೇತಿ ತೇನೇಹ ಕಥಿತೇಽಯಮ್ ॥೬॥ ೪೩

(ಮಾಯಾತಃ) ಮಾಯೆಯದೆಸೆಯಿಂದ (ತದನು) ಆ ನಿಯತಿತತ್ತ್ವದ ತರುವಾಯ (ಕಲಾ) ಕಲೆಯು (ಭವತಿ) ಆಗುತ್ತದೆ. (ನೃಣಾಂ) ಪುರುಷರ (ಮಲಂ) ಮಲವನ್ನು (ಏಕತಸ್ತು) ಒಂದೆಡೆಗೆ (ಕಲಯಿತ್ವಾ) ತೊಲಗಿಸಿ

(ಕರ್ತೃಶಕ್ತಿಂ) ಜ್ಞಾನಕ್ರಿಯಾ ರೂಪಶಕ್ತಿಯನ್ನು (ವ್ಯಂಜಯತಿ) ಪ್ರಕಟಿಸುತ್ತದೆ. (ತೇನ) ಆ ಮಲವನ್ನು ತೊಲಗಿಸುವುದರಿಂದ (ಇಹ) ಇಲ್ಲಿ (ಇಯಂ) ಇದು (ಕಲೇತಿ) ಕಲೆಯೆಂದು (ಕಥಿತಾ) ಹೇಳಲ್ಪಟ್ಟಿತು.

ವಿಚಾರ—

ಯಥಾಗ್ನಿತಪ್ತಂ ಮೃತ್ಪಾತ್ರಂ ಜತು ನಾ ಲಿಂಗನೇಕ್ಷಮಮ್ ।
ತಥಾಣುಂ ಕಲಯಾವಿದ್ಧಂ ಭೋಗಃ ಶಕ್ನೋತಿ ವಾಸಿತುಮ್ ॥
ಭೋಗ ಪಾತ್ರೀ ಕಲಾಜ್ಞೇಯಾ ತದಾಧಾರಶ್ಚ ಪುದ್ಗಲಃ ।
ಭೋಗಾನಾಮಪಿ ನಾನ್ಯೋಽಸ್ತಿ ಕಲಾಂ ತ್ಯಜ್ಯ ಸಮಾಶ್ರಯಃ ॥
ತತೋಽಯಂ ನಿಯತಃ ಸ್ಪಷ್ಟಃ ಸಂಸಾರೋಽತಿ ದುರುತ್ತರಃ ॥

ಮಾಯೆಯದೆಸೆಯಿಂದ ಕಲಾತತ್ತ್ವವುಂಟಾಗತ್ತದೆ ಎಂದು ಅನ್ವಯಿಸಿಕೊಳ್ಳಬೇಕು. ಮಲಾವೃತರಾದ ಜೀವರಿಗೆ ಭೋಗವು ಲಭಿಸುವುದಿಲ್ಲವಾದ್ದರಿಂದ ಈ ಕಲೆಯು ಜೀವರ ಮಲವನ್ನು ಹೋಗಲಾಡಿಸಿ ಅವರಲ್ಲಿ ಕರ್ತೃತ್ವ ಶಕ್ತಿಯನ್ನುಂಟು ಮಾಡುತ್ತದೆ. ಬಿಂದು ವೆನಿಸಿದ ಆ ಶಕ್ತಿಯು ಜ್ಞಾನಕ್ರಿಯಾಶಕ್ತಿಯನ್ನು ಪ್ರಕಟಿಸುತ್ತದೆ. ಆದರಿಂದ ಕಲಾಸಿದ್ಧಿ.

ಕಾಲೇನ ನಿಯತ್ಯಾ ಚಾ
ಪ್ಯುಪಸರ್ಜನತಾ ಮುಪ್ಯೆತಯಾ*ಸತತಮ್ ।
ವಿದಧಾತಿ ವ್ಯಾಪಾರಂ ನಿಜ
ಮೇಷಾಹ್ಯವನಿ[2] ಪರ್ಯಂತಮ್ ॥೭॥ ೪೪

(ಏಷಾ) ಈ ಕಲೆಯು (ಉಪಸರ್ಜನತಾಂ) ಅಮುಖ್ಯತ್ವವನ್ನು (ಉಪೇತಯಾ) ಹೊಂದಿರುವ (ನಿಯತ್ಯಾ ಚ) ನಿಯತಿಯೊಡನೆಯೂ, (ಕಾಲೇನಾಪಿ) ಕಾಲದೊಡನೆಯೂ ಕೂಡ (ನಿಜಂ) ತನ್ನ ಸಂಬಂಧವಾಗಿರುವ [ಅವನಿಪರ್ಯಂತಂ] ಪೃಥಿವೀತತ್ತ್ವದವರೆಗೆ [ವ್ಯಾಪಾರಂ] ಪುರುಷನ ಭೋಗರೂಪವಾದ ವ್ಯಾಪಾರವನ್ನು [ಸತತಂ] ಯಾವಾಗಲೂ (ವಿದಧಾತಿ) ಮಾಡುತ್ತದೆ.

---

* ಮುಪೇತಯಾ (ಗ) 2 ಮೇಷಾದ್ಯವನಿ (ಗ)

ವಿಚಾರ—ಕಲೆಯು ಭೋಕ್ತೃವಿನ ಸ್ವರೂಪವನ್ನು ಪ್ರಕಟಿಸುವುದರಿಂದ ಅಂತರಂಗಕಾರಣ. ಆದ್ದರಿಂದ ಅದು ಮುಖ್ಯ. ಕಾಲಾದಿಗಳಾದರೋ ಸಂಖ್ಯಾ........ನಿಯಮಗಳನ್ನು ಮಾಡುವುದರಿಂದ ಅವು ಬಹಿರಂಗ; ಆದ್ದರಿಂದಲೇ ಅಮುಖ್ಯವೆನಿಸಿವೆ.

ಉದ್ಬುದ್ಧ ಕರ್ತೃ ಶಕ್ತೇಃ
ಪುಂಸೋ ವಿಷಯಪ್ರದರ್ಶನ ನಿಮಿತ್ತಮ್ ।
ವಿದ್ಯಾತತ್ತ್ವಂ ಸೂತೇ[2]
ಪ್ರಕಾಶರೂಪಂ ಕಲೈವೈಷಾ ॥[3] ॥೮॥ ೪೫

[ಉದ್ಬುದ್ಧ ಕರ್ತೃ ಶಕ್ತೇಃ] ಕಲೆಯಿಂದ ಪ್ರಕಟಿಸಲ್ಪಟ್ಟ ಸಾಮರ್ಥ್ಯವುಳ್ಳ [ಪುಂಸಃ] ಪುರುಷನಿಗೆ [ವಿಷಯಪ್ರದರ್ಶನ ನಿಮಿತ್ತಂ] ವಿಷಯಗಳನ್ನು ತೋರಿಸುವುದಕ್ಕೋಸ್ಕರ (ಏಷಾ ಕಲೈವ) ಈ ಕಲಾ ತತ್ತ್ವವೇ [ಪ್ರಕಾಶ ರೂಪಂ] ಪ್ರಕಾಶವಾಗಿರುವ (ವಿದ್ಯಾತತ್ತ್ವಂ) ವಿದ್ಯಾತತ್ತ್ವವನ್ನು (ಸೂತೇ) ಹಡೆಯುತ್ತದೆ. "ಕಲಾತತ್ತ್ವಾದ್ರಾಗವಿದ್ಯೇ ದ್ವೇ ತತ್ತ್ವೇ ಸಂಬಭೂವತುಃ" ಎಂದು ಮೃಗೇಂದ್ರವು ಇದನ್ನು ಸೂಚಿಸಿದೆ.

ಸುಖದುಃಖ ಮೋಹವಪುಷೋ ಭೋಗ್ಯಾಯಾ ವ್ಯಂಜಿಕಾ ಚ ಸಾ ಬುದ್ಧೇಃ ।
ಮಾಯಾ ತ ಏವ ವಿದ್ಯಾ ಪ್ರಕಾಶರೂಪಾ ಸಮುದ್ಭವತಿ॥ —(ಶೈವರಹಸ್ಯೇ)

ಆವರಣಂ ಭಿತ್ವೈಷಾ
ಜ್ಞಾನಾಖ್ಯಾ ಯಾ ಸ್ವಕರ್ಮಣಾ ಶಕ್ತೇಃ ।
ದರ್ಶಯತಿ ವಿಷಯಜಾತಂ
ಕರಣಂ ಸೇಹಾತ್ಮನಃ ಪರಮಮ್ ॥೯॥ ೪೬

[ಏಷಾ] ಈ ವಿದ್ಯೆಯು (ಜ್ಞಾನಾಖ್ಯಾಯಾಃ ಶಕ್ತೇಃ) ಆತ್ಮನ ಕ್ರಿಯಾ ರೂಪವಾದ ಶಕ್ತಿಯು (ಆವರಣಂ) 'ವಿಷಯವನ್ನು ಗ್ರಹಿಸಲಾರದು' ಎಂಬ

---

[2] ಸೂತೇ (ಗ) [3] ಉಪೇತಯಾ (ಗ)

ಮರೆಯನ್ನು (ಸ್ವಕರ್ಮಣಾ) ತನ್ನ ವ್ಯಾಪಾರದಿಂದ (ಭಿತ್ವಾ) ತೊಲಗಿಸಿ (ವಿಷಯಜಾತಂ) ವಿಷಯ ಸಮೂಹವನ್ನು (ದರ್ಶಯತಿ) ತೋರಿಸುತ್ತದೆ. ಈಕಾರಣದಿಂದ (ಸಾ) ಆ ವಿದ್ಯೆಯು (ಇಹ) ಈ ಭೋಗ ರೂಪವಾದ ಕಾರ್ಯದಲ್ಲಿ [ಆತ್ಮನಃ] ಜೀವಾತ್ಮನಿಗೆ [ಪರಮಂ] ಅಂತರಂಗವಾಗಿರುವ [ಕರಣಂ] ಕರಣವು.

ವಿಚಾರ—ಆತ್ಮನ ಶಕ್ತಿಯು ಅನಾದಿಯಿಂದಲೂ ಮಲದಿಂದ ತಡೆಯಲ್ಪಟ್ಟದೆ. ಕಲೆಯಿಂದ ಮಲನಿವೃತ್ತಿಯಾದರೂ, ವಿದ್ಯೆಯೆಂಬ ಕಾರಣವಿಲ್ಲದೆ ವಿಷಯವನ್ನು ಗ್ರಹಿಸಲಾರದು. ಆದಕಾರಣ ವಿದ್ಯೆಯೇ ಮುಖ್ಯವಾದ ಕರಣ.

ಸಂದೇಹ—ವಿಷಯವನ್ನು ಗ್ರಹಿಸುವಲ್ಲಿ ಬುದ್ಧಿ ಮೊದಲಾದ ಕರಣಗಳು ಉಂಟಲ್ಲವೆ ?

ಸಮಾಧಾನ—ನಿಜ, ಆದರೆ ಹೇಗೆ ಘಟಾದಿಗಳ ಜ್ಞಾನವು ಚಕ್ಷುಮೊದಲಾದವುಗಳಿಲ್ಲದೆ ಆಗುವುದಿಲ್ಲವೊ ಹಾಗೆ ಸುಖಾದಿವಿಷಯಗ್ರಹಣವು 'ವಿದ್ಯಾ' ಎಂಬ ಕರಣವಿಲ್ಲದೆ ಆಗುವುದಿಲ್ಲ. ಆದ್ದರಿಂದಲೇ ವಿದ್ಯೆಯು ಆತ್ಮನಿಗೆ ಅಂತರಂಗಕಾರಣ. ಉಳಿದವು ಬಹಿರಂಗಕರಣಗಳು.

ಈ ವಿದ್ಯೆಯು ಮುಖ್ಯಕರಣ ವೆಂಬುದನ್ನು ತೋರಿಸುತ್ತಾನೆ.

ಬುದ್ಧಿರ್ಯದಾಸ್ಯ ಭೋಗ್ಯಾ
ಸುಖಾದಿರೂಪಾ ತದಾ ಭವೇತ್ಕರಣಮ್ ।
ವಿದ್ಯೈವ ಕರಣಂ ಸ್ಯಾ-
ದ್ವಿಷಯಗ್ರಹಣೇ ಪುನರ್ಬುದ್ಧಿಃ ॥ ॥೧೦॥ ೪೭

[ಅಸ್ಯ] ಈ ಪುರುಷನಿಗೆ (ಸುಖಾದಿರೂಪಾ) ಸತ್ವರಜಸ್ತಮೋಗುಣಾತ್ಮಕವೂ ಸುಖದುಃಖರೂಪವೂ ಆಗಿರುವ (ಬುದ್ಧಿಃ) ಬುದ್ಧಿಯು (ಯದಾ) ಯಾವಾಗ (ಭೋಗ್ಯಾ) ಆತ್ಮನಿಗೆ ಭೋಗಿಸಲು ತಕ್ಕದು [ಭವೇತ್] ಆಗುವುದೊ [ತದಾ] ಆಗ [ಇಯಂವಿದ್ಯಾ] ಈ ವಿದ್ಯೆಯು [ಕರಣಂ] ಕರಣವು

[ಸ್ಯಾತ್] ಆಗುವುದು. (ವಿಷಯಗ್ರಹಣೇಪುನಃ) ಹೊರಗಿನ ರೂಪಾದಿ ವಿಷಯಗಳನ್ನು ಗ್ರಹಿಸುವ ವಿಷದಲ್ಲಿಯಾದರೋ (ಬುದ್ಧಿಃ) ಬುದ್ಧಿಯು (ಕರಣಂ) ಕರಣವು.

ವಿಚಾರ—ಇಲ್ಲಿ ಪುರುಷನು ಮನಸ್ಸಿನೊಡನೆ ಕೂಡಿದ ಇಂದ್ರಿಯ ಗಳಿಂದ ಗ್ರಹಿಸಲ್ಪಟ್ಟ ಪದಾರ್ಥವನ್ನು ಬುದ್ಧಿ (ಕರಣ) ಯಿಂದ ನಿಶ್ಚೈಸುವನು. ಅಂಥ ನಿಶ್ಚಿತವಾದ ಬುದ್ಧಿಯನ್ನು 'ನಾನುಸುಖಿ' 'ನಾನುದುಃಖಿ' ಎಂದು ಅರಿಯುವಲ್ಲಿ ವಿದ್ಯೆಯು ಕರಣವಾಗುತ್ತದೆ. ಇದೇ ಪುರುಷನ ಭೋಗ.

ವಿದ್ಯಾತತ್ತ್ವವನ್ನು 'ಅಶುದ್ಧವಿದ್ಯಾ' ಎಂದು ಕರೆಯುತ್ತಾರೆ. ಅಶುದ್ಧವಾದ ಬುದ್ಧಿತತ್ತ್ವವನ್ನು ಬೋಧಿಸುವುದು ಅಶುದ್ಧವಿದ್ಯೆ. ಮಲಾದಿ ಗಳಿಂದ ಅಶುದ್ಧವಾದ ಕ್ಷೇತ್ರಜ್ಞನ ವಿದ್ಯೆ ಎಂದರೂ ಅದೇಯೇ.

ವಿದ್ಯೇಯಂ ಸರ್ವಭಾವಾನಾಮಶುದ್ಧಾರ್ಥಪ್ರದಾಯಿಕಾ ।
ಶಿವಸದ್ಭಾವಕುಶಲಾ ವಿದ್ಯಾನ್ಯಾ ಶುದ್ಧಗೋಚರಾ ॥

ಎಂದು ಹೇಳಲಾಗಿದೆ. ಇದು ಇಂದ್ರಗೋಪ ವರ್ಣವುಳ್ಳದ್ದು.

ವಿದ್ಯಾತತ್ತ್ವಂ ಪರಂ ರಾಗಾದಶುದ್ಧಂ ಪಶುಮೋಹನಮ್ ।
ಇಂದ್ರಗೋಪಕ ಸಂಕಾಶಂ ಕ್ವಚಿಚ್ಚಾಮೀಕರಪ್ರಭಮ್ ॥

ರಾಗ ತತ್ತ್ವಸಿದ್ಧಿಯನ್ನು ಹೇಳುತ್ತಾನೆ.

ರಾಗೋಽಭಿಷ್ವಂಗಾತ್ಮಾ
ವಿಷಯಚ್ಛೇದಂ ವಿನೈವ ಸಾಮಾನ್ಯಃ ।
ಪುರುಷಪ್ರವೃತ್ತಿಹೇತುಃ
ವಿಲಕ್ಷಣೋ ಬುದ್ಧಿಧರ್ಮೇಭ್ಯಃ ॥ ॥೧೧॥ ೪೭

(ರಾಗಃ) ರಾಗತತ್ತ್ವವು (ಅಭಿಷ್ವಂಗಾತ್ಮಾ) ಅಭಿಲಾಷಾರೂಪವಾದ ಕಾರ್ಯವುಳ್ಳದ್ದು. ಕೆಲವರು ದಾರ್ಶನಿಕರು ವಿಷಯಗಳೇ ಅಭಿಲಾಷೆಯನ್ನು ಹುಟ್ಟಿಸುವವು ಎಂದು ಹೇಳುತ್ತಾರೆ. ಆದರೆ ಹಾಗಲ್ಲವೆಂದು ಹೇಳುತ್ತಾನೆ:— (ವಿಷಯಚ್ಛೇದಂ ವಿನೈವ) ವಿಷಯಸಮೂಹದಲ್ಲಿಯೇ (ಸಾಮಾನ್ಯಃ) ಅಭಿಲಾಷೆಯನ್ನು ಹುಟ್ಟಿಸುತ್ತದೆ. ಮತ್ತೆ ಕೆಲವರು ದಾರ್ಶನಿಕರು

ಅವೈರಾಗ್ಯರೂಪವಾದ ಬುದ್ಧಿ ಧರ್ಮವೇ ಪುರುಷನ ಪ್ರವೃತ್ತಿಗೆ ಕಾರಣ ವೆಂದು ಹೇಳುತ್ತಾರೆ. ಆದರೆ ಆದೂಸರಿಯಲ್ಲ ವೆಂದು ಹೇಳುತ್ತಾನೆ:— (ಬುದ್ಧಿಧರ್ಮೇಭ್ಯಃ) ಬುದ್ಧಿಯಗುಣಗಳ ದೆಸೆಯಿಂದ (ವಿಲಕ್ಷಣಃ) ಭಿನ್ನಸ್ವರೂಪವಾಗಿರುವುದು.

ಪುರುಷನು ಚೇತನಸ್ವರೂಪನಾದ್ದರಿಂದ ಶಿವತತ್ತ್ವದಂತೆ ಜಡ ವಾದತತ್ತ್ವಗಳಲ್ಲಿ ತತ್ತ್ವವಾಗಿರುವ ಪುರುಷನನ್ನು ಗಣಿಸುವುದು ಸರಿಯಲ್ಲ. ಆದ್ದರಿಂದ ಆತ್ಮನಿಗೆ ಉಪಾಧಿಗಳಿಂದ ಪುರುಷತತ್ತ್ವ ವೆಂಬ ಹೆಸರು ಬಂದಿ ತೆಂದು ಹೇಳುತ್ತಾನೆ.

ತತ್ತ್ವೈರೇಭಿಃ ಕಲಿತೋ
ಭೋಕ್ತೃತ್ವದಶಾಂ ಯದಾ ಪಶುರ್ನೀತಃ ।
ಪುರುಷಾಖ್ಯಾತಾಂ ತದಾಯಂ
ಲಭತೇ ತತ್ತ್ವೇಷು ಗಣನಾಂ ಚ ॥೧೨॥ ೪೯

(ಪಶುಃ) ಜೀವನು (ಏಭಿಃ ತತ್ತ್ವೈಃ) ಕಾಲ, ನಿಯತಿ, ಕಲೆ, ವಿದ್ಯೆ, ರಾಗ, ಎಂಬ ಐದು ತತ್ತ್ವಗಳಿಂದ [ಕಲಿತಃ] ಕೂಡಿದವನಾಗಿ [ಭೋಕ್ತೃ ತ್ವದಶಾಂ] ಭೋಕ್ತೃತ್ವವೆಂಬ ಅವಸ್ಥೆಯನ್ನು (ಯದಾ) ಯಾವಾಗ (ನೀತಃ) ಒಯ್ಯಲ್ಪಟ್ಟನೋ (ತದಾ) ಆಗ (ಅಯಂ) ಈ ಆತ್ಮನು [ಪುರುಷಾ ಖ್ಯಾತಾಂ] ಅವ್ಯಕ್ತಾದಿ ಚತುರ್ವಿಂಶತಿ ತತ್ತ್ವಮಯವಾದ ಪುರದಲ್ಲಿ ಶಯನ ಮಾಡಿದ್ದರಿಂದ 'ಪುರುಷ' ಎಂಬ ಹೆಸರನ್ನು (ತತ್ತ್ವೇಷು) ತತ್ತ್ವಗಳಲ್ಲಿಯ (ಗಣನಾಂ ಚ) ಗಣನೆಯನ್ನು (ಲಭತೇ) ಪಡೆಯುತ್ತಾನೆ.

ತತ್ತ್ವಪ್ರಕಾಶಿಕೆಯಲ್ಲಿ ಶುದ್ಧಾಶುದ್ಧನಿರ್ಣಯವೆಂಬ
ತೃತೀಯ ಪರಿಚ್ಛೇದವುಗಿದುದು.

# ಚತುರ್ಥ ಪರಿಚ್ಛೇದ

ಈಗ ಅವ್ಯಕ್ತ ಸ್ವರೂಪ ನಿರೂಪಣವನ್ನು ಮಾಡುತ್ತಾನೆ.

ಪುರುಷಸ್ಯ ಹಿ ಭೋಗಾರ್ಥಂ
[1]ಕಲ್ಯೈವ[1] ತಸ್ಮಾತ್ಪ್ರಸೂಯತೇಽವ್ಯಕ್ತಮ್ ।
ಅನಭಿವ್ಯಕ್ತಗುಣತ್ವಾ-
ದವ್ಯಪ[2]ದೇಶ್ಯಂ[2] ತದವ್ಯಕ್ತಮ್ ॥೧॥ ೫೦

(ಪುರುಷಸ್ಯ) ಪುರುಷನ (ಭೋಗಾರ್ಥಂ) ಭೋಗಸಾಧನವಾದ ತತ್ತ್ವಗಳಿಗೋಸ್ಕರ (ಕಲ್ಯೈವ) ಕಲೆಯೇ (ತಸ್ಮಾತ್) ಆ ರಾಗತತ್ತ್ವದ ತರುವಾಯ (ಅವ್ಯಕ್ತಂ) ಪ್ರಕೃತಿ ತತ್ತ್ವವನ್ನು (ಪ್ರಸೂಯತೇ ಹಿ) ಉಂಟುಮಾಡುತ್ತದೆ ಎಂಬುದು ಪ್ರಸಿದ್ಧ. ಸಾಂಖ್ಯರು ಸಾಮ್ಯಾವಸ್ಥೆಯನ್ನು ಪಡೆದ ಗುಣಗಳೇ ಪ್ರಕೃತಿಯೆಂದು ಹೇಳುತ್ತಾರೆ. ಅದಲ್ಲವೆಂದು ಹೇಳುತ್ತಾನೆ:—(ತತ್ ಅವ್ಯಕ್ತಂ) ಆ ಪ್ರಕೃತಿಯು (ಅನಭಿವ್ಯಕ್ತಗುಣತ್ವಾತ್) ವ್ಯಕ್ತವಾಗದ ಗುಣಗಳುಳ್ಳದಾದ್ದರಿಂದ (ಅವ್ಯಪದೇಶ್ಯಂ) ನಿರ್ದೇಶ ಮಾಡಲು ಅನರ್ಹವಾಗಿದೆ.

ವಿಚಾರ—ಸತ್ವ, ರಜಸ್ಸು ಮತ್ತು ತಮಸ್ಸೆಂಬ ಗುಣಗಳು ಪ್ರಕೃತಿಯ ಕಾರ್ಯಗಳಾದ್ದರಿಂದ ಅವು ಪ್ರಕೃತಿಗಿಂತ ಭಿನ್ನ. ಪ್ರಕೃತಿಯು ಗುಣಗಳಿಗೆ ಕಾರಣವಾಗಿರುವುದರಿಂದ ಅದು ಅವ್ಯಕ್ತರೂಪ.

ಸತ್ವಾದಿ ಗುಣಗಳು ಸುಖಾದಿಗಳನ್ನು ಉಂಟುಮಾಡುವುದರಿಂದ ಕ್ರಮೇಣ ಅವು ಸುಖದುಃಖಾದಿಗಳೆಂದೇ ಹೇಳಲ್ಪಟ್ಟಿವೆ. ಭೂತ, ತನ್ಮಾತ್ರ, ಇಂದ್ರಿಯ, ಮನಸ್ಸು, ಅಹಂಕಾರ, ಬುದ್ಧಿ ಮುಂತಾದ ಅವ್ಯಕ್ತ ಕಾರ್ಯಗಳು ಸುಖದುಃಖ ಮೋಹ ಹೇತುವಾದ್ದರಿಂದ ಇವೂ ಗುಣಾತ್ಮಕವೆನಿಸಿವೆ.

ಗುಣತತ್ತ್ವವನ್ನು ಲಕ್ಷಿಸುತ್ತಾನೆ—

ಅವ್ಯಕ್ತಾದ್ಗುಣತತ್ತ್ವಂ
ಪ್ರಖ್ಯಾ ವ್ಯಾಪಾರನಿಯಮರೂಪಮಿಹ ।

---

[1]ಕಲ್ಲೈವ (ಗ) [2]ದೇಶಂ (ಗ)

ಸತ್ವಂ ರಜಸ್ತಮೋಽಪಿ ಚ
[1]ಸುಖದುಃಖೇ[1] [2]ಮೋಹ ಇತ್ಯಪಿ ಚ[2] ||೨|| ೫೧

(ಇಹ) ಇಲ್ಲಿ (ಪ್ರಖ್ಯಾವ್ಯಾಪಾರನಿಯಮರೂಪಂ) ಪ್ರಕಾಶ ಪ್ರವೃತ್ತಿ ನಿಯಮರೂಪ ಕಾರ್ಯಗಳುಳ್ಳ (ಗುಣತತ್ತ್ವಂ) ಗುಣತತ್ತ್ವವು (ಅವ್ಯಕ್ತಾತ್) ಪ್ರಕೃತಿ ತತ್ತ್ವದ ದೆಸೆಯಿಂದ (ಭವತಿ) ಆಗುತ್ತದೆ. ಆ ಗುಣ ತತ್ತ್ವವು (ಅಪಿ ಚ) ಮತ್ತು (ಸತ್ವಂ) ಸತ್ವಗುಣವೆಂದೂ (ರಜಃ) ರಜೋ ಗುಣವೆಂದೂ, (ತಮಃ) ತಮೋಗುಣವೆಂದೂ ಮೂರು ವಿಧವಾಗಿದೆ. (ಅಪಿ ಚ) ಮತ್ತು ಈ ಗುಣಗಳು ಕ್ರಮವಾಗಿ ಸುಖ, ದುಃಖ ಮತ್ತು ಮೋಹಕ್ಕೆ ಕಾರಣವಾದುದರಿಂದ (ಸುಖ ದುಃಖೇ) ಸುಖ ದುಃಖಗಳೆಂದು (ಮೋಹ ಇತಿ) ಮೋಹನೆಂದೂ ಕರೆಯಲ್ಪಟ್ಟಿವೆ. 'ಪ್ರಖ್ಯಾ ವ್ಯಾಪಾರ ನಿಯಮ' ಎಂಬುದಕ್ಕೆ ಅವಯವಾರ್ಥವು ಹೀಗಿದೆ:—'ಪ್ರಖ್ಯಾ ಪ್ರಕಾಶೋ ಜ್ಞಾನಂ ವೃತ್ತಿಃ, ಸತ್ವಗುಣಸ್ಯ ನಿರ್ಮಲತ್ವಾತ್ । ವ್ಯಾಪಾರಃ ಕ್ರಿಯಾ, ರಜಸೋ ವೃತ್ತಿಃ ಚಲತ್ವಾತ್ । ನಿಯಮೋ ನಿಯಮನಂ ವೃತ್ತಿಸ್ತಮಸಃ ಗುರುತ್ವಾತ್' ॥ ಸಾಂಖ್ಯರು ಈ ಬಗ್ಗೆ ಹೀಗೆ ಹೇಳಿದ್ದಾರೆ.

ಸತ್ವಂ ಲಘುಪ್ರಕಾಶಕಮಿಷ್ಟಮುಪಷ್ಟಂಭಕಂ ಚಲಂ ಚ ರಜಃ ।
ಗುರುವರುಣಕಮೇವ ತಮಃ ಪ್ರದೀಪವಚ್ಚಾರ್ಥತೋ ವೃತ್ತಿಃ ॥

ಇವುಗಳ ವರ್ಣಗಳು ಸತ್ವ–ಬಿಳುಪು, ರಜಸ್ಸು–ಕೆಂಪು, ತಮಸ್ಸು–ಕಪ್ಪು.

ಈಗ ಬುದ್ಧಿತತ್ತ್ವವನ್ನು ಹೇಳುತ್ತಾನೆ—

ಭವತಿ ಗುಣ[3]ತ್ರಯತೋ ಧೀಃ[3]
[4]ವಿಷಯಾಧ್ಯವಸಾಯ[4] ರೂಪಿಣೀ [5]ಚೇಹ[5] ।
ಸಾಪಿ ತ್ರಿವಿಧಾ ಗುಣತಃ
[6]ಪ್ರಾಕ್ತನ[6] ಕರ್ಮಾನುಸಾರೇಣ ||೩|| ೫೨

[1]ಸುಖ ದುಃಖಂ (ಗ) [2]ಮೋಹ ಇತಿ ಚ (ಗ) [3]ತ್ರಯ ಧೀ (ಕ) [4]ವಿಷಯೋಽಧ್ಯವಸಾಯ (ಖ) [5]ಚೇತಿ (ಗ) [6]ಪ್ರೋಕ್ತ (ಕ)

(ಇಹ) ಇಲ್ಲಿ (ಗುಣತ್ರಯಶಃ) ಮೂರು ಗುಣಗಳ ದೆಸೆಯಿಂದ (ವಿಷಯಾಧ್ಯವಸಾಯರೂಪಿಣೀ) ವಿಷಯಗಳ ನಿಶ್ಚಯಜ್ಞಾನರೂಪವಾದ ಕಾರ್ಯವುಳ್ಳ (ಧೀಶ್ಚ) ಬುದ್ಧಿಯು (ಭವತಿ) ಆಗುತ್ತದೆ. (ಸಾಪಿ) ಆ ಬುದ್ಧಿಯೂ ಪ್ರಾಕ್ತನ ಕರ್ಮಾನುಸಾರೇಣ ಪೂರ್ವಜನ್ಮದಲ್ಲಿ ಮಾಡಿದ ಕರ್ಮ ವಶದಿಂದ (ಗುಣತಃ) ಸತ್ವರಜಸ್ತಮೋಗುಣಗಳ ಆಧಿಕ್ಯದಿಂದ (ತ್ರಿವಿಧಾ) ಸಾತ್ವಿಕ ಬುದ್ಧಿ, ರಾಜಸಬುದ್ಧಿ ಮತ್ತು ತಾಮಸಬುದ್ಧಿ ಎಂದು ಮೂರು ವಿಧವಾಗಿ (ಭವತಿ) ಆಗುತ್ತದೆ.

ವಿಚಾರ---ಇಲ್ಲಿ 'ಚ' ಕಾರದಿಂದ ೧) ಧರ್ಮ, ೨) ಜ್ಞಾನ, ೩) ವೈರಾಗ್ಯ, ೪) ಐಶ್ವರ್ಯ, ೫) ಅಧರ್ಮ, ೬) ಅಜ್ಞಾನ, ೭) ಅವೈರಾಗ್ಯ ಮತ್ತು ೮) ಅನೈಶ್ವರ್ಯ ಎಂಬ ಎಂಟು ವಿಧವಾದ ವೃತ್ತಿಗಳುಳ್ಳ ಬುದ್ಧಿ ಎಂದು ಸೂಚಿತವಾಗುತ್ತದೆ. ಅದನ್ನೇ

ಅಧ್ಯವಸಾಯೋ ಬುದ್ಧಿರ್ಧರ್ಮೋ ಜ್ಞಾನಂ ವಿರಾಗವೈಶ್ವರ್ಯಮ್ ।
ಸಾತ್ವಿಕಮೇತದ್ರೂಪಂ ತಾಮಸಮಸ್ಮಾತ್ ವಿಪರ್ಯಯಸ್ತಮ್ ॥

ಇವುಗಳಲ್ಲಿ ಅಭ್ಯುದಯ ಮತ್ತು ನಿಶ್ರೇಯಸ್ಸುಗಳಿಗೆ ಕಾರಣವಾದುದು ಧರ್ಮ. ಜ್ಞಾನವು ಪ್ರಮಾಣ ಮತ್ತು ಸ್ಮೃತಿ ಎಂದು ಎರಡು ವಿಧ. ಸರಿಯಾದ ಅನುಭವವೇ ಪ್ರಮಾಣ. ಅನುಭೂತವಾದ ವಿಷಯಗಳ ನೆನಪು ಸ್ಮೃತಿ.

ಅನುಭೂತಿಃ ಪ್ರಮಾಣಂ ಸಾ ಸ್ಮೃತೇರನ್ಯಾ ತು ಸಾ ಸ್ಮೃತಿಃ ।
ಪೂರ್ವಾನುಭವಸಂಸ್ಕಾರಮಾತ್ರಜಂ ಜ್ಞಾನಮುಚ್ಯತೇ ॥

ಪ್ರಮಾಣಗಳನ್ನು ಒಪ್ಪುವವರೇ ದಾರ್ಶನಿಕರು. ಕೆಲ ಕೆಲವರು ಕೆಲ ಕೆಲವು ಪ್ರಮಾಣಗಳನ್ನು ಪರಿಗ್ರಹಿಸುತ್ತಾರೆ. ಚಾರ್ವಾಕರಿಗೆ ಪ್ರತ್ಯಕ್ಷವು ಮಾತ್ರ ಪ್ರಮಾಣ. ಆರ್ಹತ (ಜೈನ) ರು ಪ್ರತ್ಯಕ್ಷವನ್ನು ಸ್ಪಷ್ಟ ಮತ್ತು ಅಸ್ಪಷ್ಟವೆಂದು ಎರಡು ವಿಭಾಗಮಾಡಿ ಒಪ್ಪುತ್ತಾರೆ. ಬೌದ್ಧ ಮತ್ತು ವೃದ್ಧ ವೈಶೇಷಿಕರು ಪ್ರತ್ಯಕ್ಷ ಮತ್ತು ಅನುಮಾನಗಳನ್ನು ಒಪ್ಪುತ್ತಾರೆ. ಸಾಂಖ್ಯ ಮತ್ತು ನೂತನ ವೈಶೇಷಿಕರು ಪ್ರತ್ಯಕ್ಷ ಅನುಮಾನಗಳ ಜೊತೆಗೆ ಶಬ್ದ ವನ್ನೂ ಒಪ್ಪುತ್ತಾರೆ. ವೃದ್ಧ ನೈಯಾಯಿಕರು ಮೇಲಿನವುಗಳ ಜೊತೆಗೆ ಉಪಮಾನವನ್ನು ಪರಿಗ್ರಹಿಸುತ್ತಾರೆ. ಪ್ರಾಭಾಕರರು ಈ ನಾಲ್ಕರ ಜೊತೆಗೆ

ಅರ್ಥಾಪತ್ತಿಯನ್ನು ಸೇರಿಸುತ್ತಾರೆ. ಭಾಟ್ಟರು ಈ ಐದರ ಜೊತೆಗೆ ಅಭಾವ ವನ್ನು ಹೇಳುತ್ತಾರೆ. ಐತಿಹಾಸಿಕರು ಐತಿಹ್ಯ ಮತ್ತು ಸಂಭವ ಎಂಬುವನ್ನು ಸೇರಿಸಿಕೊಳ್ಳುತ್ತಾರೆ. ಶೈವರಿಗೆ ಮಾತ್ರ ಪ್ರತ್ಯಕ್ಷ, ಅನುಮಾನ ಮತ್ತು ಶಾಬ್ದವೆಂಬ ಮೂರು ಪ್ರಮಾಣಗಳು. ಈ ಪ್ರಮಾಣಗಳ ಸ್ವರೂಪವು ತರ್ಕ ಸಂಗ್ರಹಾದಿಗಳಲ್ಲಿ ವಿವರಿಸಲ್ಪಟ್ಟಿದೆ.

ವಿಷಯ ವಿಮುಖತೆಯೇ ವೈರಾಗ್ಯ. ಅಣಿಮಾದಿಗಳು ಐಶ್ವರ್ಯ. ಮೇಲೆ ಹೇಳಿದ ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯಗಳಿಗೆ ವಿಪ ರೀತವೂ, ತಾಮಸವೂ ಆದವುಗಳೇ ಅಧರ್ಮ, ಅಜ್ಞಾನ, ಅವೈರಾಗ್ಯ ಮತ್ತು ಅನೈಶ್ವರ್ಯಾದಿಗಳು.

> ಧರ್ಮೇಣ ಗಮನಮೂರ್ಧ್ವಂ ಗಮನಮಧಸ್ತಾತ್ ಭವತ್ಯಧರ್ಮೇಣ ।
> ಜ್ಞಾನೇನ ಚಾಪವರ್ಗೋ ವಿಪರ್ಯಯಾದಿಷ್ಯತೇ ಬಂಧಃ ॥
> ವೈರಾಗ್ಯಾತ್ ಪ್ರಕೃತಿಲಯಃ ಸಂಸಾರೋ ರಾಜಸಾತ್ ಭವತಿ ರಾಗಾತ್ ।
> ಐಶ್ವರ್ಯಾದವಿಘಾತೋ ವಿಪರ್ಯಯಾತ್ ತದ್ವಿಪರ್ಯಾಸಃ ॥

ಈಗ ಅಹಂಕಾರ ತತ್ತ್ವವನ್ನು ನಿರೂಪಿಸುತ್ತಾನೆ.

> ಸ್ಯಾತ್ತ್ರಿವಿಧೋಽಹಂಕಾರೋ
> ಜೀವನಸಂರಂಭಗರ್ವರೂಪೋಽಯಮ್ ।
> ಸಂಭೇದಾದಸ್ಯಸತೋ
> ವಿಷಯೋ ವ್ಯವಹಾರ್ಯತಾಮೇತಿ ॥೪॥ ೫೩

(ತ್ರಿವಿಧಃ) ಮೂರು ವಿಧವಾಗಿರುವ (ಅಹಂಕಾರಃ) ಅಹಂಕಾರವು (ಸ್ಯಾತ್) ಆ ಬುದ್ಧಿಯ ದೆಸಯಿಂದ ಆಗುತ್ತದೆ. (ಅಯಂ) ಈ ಅಹಂ ಕಾರವು (ಜೀವನಸಂರಂಭಗರ್ವರೂಪಃ) ಪ್ರಾಣಾದಿ ವಾಯುಗಳನ್ನು ಪ್ರೇರಿ ಸುತ್ತಾ ಜೀವನ ರೂಪವೆನಿಸಿಕೊಂಡು, ಪುರುಷನ ಪ್ರಯತ್ನಕ್ಕೆ ಕಾರಣವಾಗಿ ಸಂರಂಭವೆನಿಸಿಕೊಂಡು 'ನಾನು' ಎಂಬ ಜ್ಞಾನಕ್ಕೆ ಕಾರಣವಾಗಿ 'ಗರ್ವ' ವೆನಿಸಿಕೊಳ್ಳುತ್ತದೆ. (ಸತಃ) ಹೀಗಿರುವ (ಅಸ್ಯ) ಈ ಅಹಂಕಾರದ (ಸಂಭೇ ದಾತ್) ಸಂಪರ್ಕದ ದೆಸೆಯಿಂದ (ವಿಷಯಃ) ಶಬ್ದಾದಿ ವಿಷಯವು (ವ್ಯವ ಹಾರ್ಯತಾಂ) (ಶಬ್ದವನ್ನು ಅರಿತೆನು' 'ರೂಪವನ್ನು ಅರಿತೆನು' ಮುಂತಾದ

ವ್ಯವಹಾರಕ್ಕೆ ಯೋಗ್ಯವಾಗಿ (ಏತಿ) ಆಗುತ್ತದೆ. ಆದ್ದರಿಂದ ಪುರುಷನಿಗೆ ಸುಖ ದುಃಖಗಳ ವೇದನಾರೂಪವಾದ ಭೋಗವು ಅಹಂಕಾರದಿಂದ ಉಂಟಾಗುತ್ತದೆ ಎಂದು ಅರ್ಥ.

ವಿಚಾರ—'ಸಂರಂಭೋಽಹಂಕೃತೇರ್ವೃತ್ತಿಃ' ಎಂದರೆ ಗರ್ವವು ಅಹಂಕಾರದ ವ್ಯಾಪಾರವೇ ಆಗಿದೆ. ಅದು ಪ್ರಾಣಾದಿ ವಾಯು ಪ್ರವೃತ್ತಿಗೂ ಕಾರಣವಾಗಿರುವುದರಿಂದ ಜೀವನಕ್ಕೂ ಕೂಡ ಅಹಂಕಾರವೇ ಕಾರಣವಾಗಿದೆ. 'ಸಂರಂಭಾದ್ಯಸ್ಯ ಚೇಷ್ಟಂತೇ ಶರೀರಾಃ ಪಂಚವಾಯವಃ' ಎಂಬ ಉಕ್ತಿ ಇದನ್ನು ಸಮರ್ಥಿಸುತ್ತದೆ.

ಪ್ರಕಾರಾಂತರದಿಂದ ಆ ಅಹಂಕಾರವು ಮೂರು ವಿಧ ಎಂದು ಹೇಳುತ್ತಾನೆ.

ಸಾತ್ವಿಕ ರಾಜಸ
ತಾಮಸ ಭೇದೇನ ಸ ಜಾಯತೇ ಪುನಸ್ತ್ರೇಧಾ ।
[1]ಸ ಚ ತೈಜಸ ವೈಕಾರಿಕ[1]
ಭೂತಾದಿಕನಾಮಭಿಃ [2]ಸಮುಚ್ಛ್ವಸತಿ[2] ‖೫‖ ೫೪

(ಸಃ) ಆ ಅಹಂಕಾರವು (ಪುನಃ) ಮತ್ತೆ (ಸಾತ್ವಿಕ ರಾಜಸ ತಾಮಸ ಭೇದೇನ) ಸಾತ್ವಿಕಾಹಂಕಾರ, ರಾಜಸಾಹಂಕಾರ ಮತ್ತು ತಾಮಸಾಹಂಕಾರವೆಂಬ ಭೇದದಿಂದ (ತ್ರೇಧಾ) ಮೂರು ವಿಧವಾಗಿ (ಜಾಯತೇ) ಆಗುತ್ತದೆ. (ಸ ಚ) ಆ ಅಹಂಕಾರವೂ ಕೂಡ (ತೈಜಸ ವೈಕಾರಿಕ ಭೂತಾದಿಕ ನಾಮಭಿಃ) ಕ್ರಮವಾಗಿ ತೈಜಸ, ವೈಕಾರಿಕ ಮತ್ತು ಭೂತಾದಿಕವೆಂಬ ಹೆಸರುಗಳಿಂದ (ಸಮುಚ್ಛ್ವಸತಿ) ಹೇಳಿಸಿಕೊಳ್ಳುತ್ತದೆ. ಎಂದರೆ ಸಾತ್ವಿಕವು ತೈಜಸಾಹಂಕಾರವೆಂದೂ, ರಾಜಸವು ವೈಕಾರಿಕಾಹಂಕಾರವೆಂದೂ, ತಾಮಸವು ಭೂತಾದಿಕಾಹಂಕಾರವೆಂದೂ ಹೇಳಿಸಿಕೊಳ್ಳುತ್ತದೆ.

ಆದರ ಕಾರ್ಯವನ್ನು ಹೇಳುತ್ತಾನೆ.

ತೈಜಸತಸ್ತತ್ರ ಮನೋ
ವೈಕಾರಿಕತೋ ಭವಂತಿ [3]ಚಾಕಾಣಿ[3]

---

[1] ಸ ಚ ವೈಕಾರಿಕ ತೈಜಸ (ಗ) [2] ಸಮುಚ್ಛ್ವಸತಿ (ಗ) [3] ಚಾಕ್ಷೀಣಿ (ಗ)

ಭೂತಾದೇಸ್ತನ್ಮಾತ್ರಾ

ಣ್ಯೇಷಾಂ [1] ಸರ್ಗೋsಯ [1] ಮೇತಸ್ಮಾತ್ ||೬|| ೫೫

(ತತ್ರ) ಆ ಮೂರು ಅಹಂಕಾರಗಳಲ್ಲಿ (ತೈಜಸತಃ) ತೈಜಸಾಹಂಕಾರದ ದೆಸೆಯಿಂದ (ಮನಃ) ಮನಸ್ಸು 'ಜ್ಞಾನೇಂದ್ರಿಯಗಳು' (ಭವಂತಿ) ಆಗುತ್ತವೆ. (ವೈಕಾರಿಕತಃ) ವೈಕಾರಿಕಾಹಂಕಾರದ ದೆಸೆಯಿಂದ (ಅಕ್ಷಾಣಿ ಚ) ಕರ್ಮೇಂದ್ರಿಯಗಳು (ಭವಂತಿ) ಆಗುತ್ತವೆ. (ಭೂತಾದೇಃ) ಭೂತಾದಿಕಾಹಂಕಾರದ ದೆಸೆಯಿಂದ (ತನ್ಮಾತ್ರಾಣಿ) ತನ್ಮಾತ್ರಗಳು (ಭವಂತಿ) ಆಗುತ್ತವೆ. (ಏಷಾಂ) ಈ ಮನಸ್ಸು ಮೊದಲಾದ ಹದಿನಾರು ತತ್ತ್ವಗಳ (ಅಯಂಸರ್ಗಃ) ಈ ಸೃಷ್ಟಿಯು (ಏತಸ್ಮಾತ್) ಈ ಅಹಂಕಾರದ ದೆಸೆಯಿಂದ (ಭವತಿ) ಆಗುತ್ತದೆ.

ವಿಚಾರ—ಮೃಗೇಂದ್ರಾಗಮದಲ್ಲಿ 'ಶ್ರೋತ್ರತ್ವಕ್ಚಕ್ಷುಷೀ ಜಿಹ್ವಾ ನಾಸಾಚ ಮನಸಾ ಸಹ। ಪ್ರಕಾಶಾನ್ವಯತಃ ಸತ್ತ್ವಾತ್ತೈಜಸಸ್ಯ ಸ ಸಾತ್ತ್ವಿಕಃ॥ ವಾಣೀ ಪಾಣೀ ಭಗಃ ಪಾಯೂ ಪಾದೌ ಚೇತಿ ಗಜೋದ್ಭವಾಃ। ಕರ್ಮಾನ್ವಯಾದ್ರಜೋ ಭೂಯಾದ್ಗಣೋ ವೈಕಾರಿಕೋsತ್ರಯಃ'॥ ಎಂದು ಹೇಳಿದೆ. ಏಕೆಂದರೆ ಸತ್ತ್ವವು ಪ್ರಕಾಶರೂಪವಾದುದರಿಂದ ಅದು ಭೋಗಕ್ಕೆ ಕಾರಣ. ರಜಸ್ಸು ಕ್ರಿಯೆಗೆ ಕಾರಣ.

ಮನಃಪೂರ್ವಕವಾದ ಇಂದ್ರಿಯಗಳ ಸ್ವರೂಪವನ್ನು ಹೇಳುತ್ತಾನೆ,

ಇಚ್ಛಾರೂಪಂ ಹಿ ಮನೋ

ವ್ಯಾಪಾರಸ್ತಸ್ಯ ಭವತಿ ಸಂಕಲ್ಪಃ।

ಬುದ್ಧ್ಯಕ್ಷಾಣಿ ಶ್ರೋತ್ರಂ ತ್ವಕ್

ದೃಗ್ಜಿಹ್ವಾ ಚ ನಾಸಾ ಚ ||೭|| ೫೬

(ಮನಃ) ಮನಸ್ಸು (ಇಚ್ಛಾರೂಪಂ ಹಿ) ಇಚ್ಛಾರೂಪವೆಂಬುದು ಪ್ರಸಿದ್ಧ. (ತಸ್ಯ) ಆ ಮನಸ್ಸಿಗೆ (ಸಂಕಲ್ಪಃ) ಸಂಕಲ್ಪವು (ವ್ಯಾಪಾರಃ) ವ್ಯಾಪಾರವಾಗಿ (ಭವತಿ) ಆಗುತ್ತದೆ. (ಶ್ರೋತ್ರಂ) ಕರ್ಣವು (ತ್ವಕ್)

[1] ಸರ್ಗಶ್ಚೈವಮೇತಸ್ಮಾತ್ (ಗ)

ಚರ್ಮೇಂದ್ರಿಯ (ದೃಕ್) ಕಣ್ಣು (ಜಿಹ್ವಾ ಚ) ನಾಲಗೆಯೂ (ನಾಸಾ ಚ) ನಾಸಿಕವೂ ಕೂಡ (ಬುದ್ಧ್ಯಕ್ಷಾಣಿ) ಜ್ಞಾನೇಂದ್ರಿಯಗಳು.

ಇವುಗಳು ಗ್ರಹಿಸುವ ವಿಷಯಗಳನ್ನು ಹೇಳುತ್ತಾನೆ.

ಗ್ರಾಹ್ಯಸ್ತೇಷಾಂ ಶಬ್ದಃ
ಸ್ಪರ್ಶೋ ರೂಪಂ ರಸಶ್ಚ ಗಂಧಶ್ಚ ।
ಇತ್ಯೇತೇಷಾಂ ವಿಷಯಾಃ
ಕ್ರಮೇಣ ಪಂಚಾಪಿ ಪಂಚಾನಾಮ್ ॥೮॥ ೫೭

(ತೇಷಾಂ) ಆ ಜ್ಞಾನೇಂದ್ರಿಯಗಳಿಗೆ (ಗ್ರಾಹ್ಯಃ) ಗ್ರಹಿಸಲು ಯೋಗ್ಯವಾದ (ಶಬ್ದಃ) ಶಬ್ದವು (ಸ್ಪರ್ಶಃ) ಸ್ಪರ್ಶವು [ರೂಪಂ] ರೂಪವು [ರಸಶ್ಚ] ರಸವು [ಗಂಧಶ್ಚ] ಗಂಧವು [ಇತಿ] ಹೀಗೆಂಬ [ಪಂಚಾಪಿ] ಐದೂ ಕೂಡ [ಏತೇಷಾಂ ಪಂಚಾನಾಂ] ಈ ಐದೂ ಇಂದ್ರಿಯಗಳಿಗೆ [ಕ್ರಮೇಣ] ಕ್ರಮವಾಗಿ [ವಿಷಯಾಃ] ವಿಷಯಗಳು.

ಜ್ಞಾನೇಂದ್ರಿಯಗಳ ಸ್ವರೂಪವನ್ನು ಹೇಳುತ್ತಾನೆ.

ಶಬ್ದಾದೀನಾಂ ಗ್ರಹಣಂ
[1]ವ್ಯಾಪಾರಃ ಕೀರ್ತಿತಃ[1] [2]ಕ್ರಮೇಣೈಷಾಮ್[2] ।
ವಾಕ್ಪಾಣಿ ಪಾದಪಾಯೂ-
[3]ಪಸ್ಥಾ[3] ಕರ್ಮೇಂದ್ರಿಯಾಣಿ ಸ್ಯುಃ ॥೯॥ ೫೮

[ಏಷಾಂ] ಈ ಜ್ಞಾನೇಂದ್ರಿಯಗಳಿಗೆ [ಶಬ್ದಾದೀನಾಂ] ಶಬ್ದಾದಿ ವಿಷಯಗಳ [ಗ್ರಹಣಂ] ಗ್ರಹಣವು [ಕ್ರಮೇಣ] ಕ್ರಮವಾಗಿ [ವ್ಯಾಪಾರಃ] ವ್ಯಾಪಾರವೆಂದು [ಕೀರ್ತಿತಃ] ಹೇಳಲ್ಪಟ್ಟಿತು. [ಕರ್ಮೇಂದ್ರಿಯಾಣಿ] ಕರ್ಮೇಂದ್ರಿಯಗಳು [ವಾಕ್ಪಾಣಿ ಪಾದಪಾಯೂಪಸ್ಥಾನಿ] ಮಾತು-ಹಸ್ತ-ಪಾದ-ಪಾಯು-ಉಪಸ್ಥಗಳು [ಸ್ಯುಃ] ಆದವು.

ಕರ್ಮೇಂದ್ರಿಯಗಳ ವ್ಯಾಪಾರವನ್ನು ಹೇಳುತ್ತಾನೆ.

---

[1]ವ್ಯಾಪಾರಾಃ ಕೀರ್ತಿತಾಃ (ಕ) [2]ಕ್ರಮಾದೇಷಾಂ (ಗ) [3]ಪಸ್ಥಂ (ಗ)

ವಚನಾದಾನ ವಿಹರಣೋ
ತ್ಸರ್ಗಾನಂದಾಶ್ಚ ಕರ್ಮೈಷಾಮ್ ।
ಅಂತಃಕರಣಂ [1]ತ್ರೇಧಾ[1]
ಬುದ್ಧಿರಹಂಕಾರ [2]ಚೇತಸೀ[2] ಚೇತಿ ॥೧೦॥ ೫೯

[ವಚನಾದಾನವಿಹರಣೋತ್ಸರ್ಗಾನಂದಾಶ್ಚ] ವಚನ-ಮಾತನಾಡುವುದು, ಆದಾನ-ತೆಗೆದುಕೊಳ್ಳುವುದು, ವಿಹರಣ-ನಡೆಯುವುದು, ಉತ್ಸರ್ಗ-ಮಲವಿಸರ್ಜನ ಮಾಡುವುದು, ಆನಂದ-ಸಂತೋಷಪಡುವುದು ಎಂಬವುಗಳು ಕ್ರಮವಾಗಿ [ಏಷಾಂ] ಈ ಕರ್ಮೇಂದ್ರಿಯಗಳ [ಕರ್ಮ] ವ್ಯಾಪಾರವು. ಇವುಗಳಲ್ಲಿ ಅಂತಃಕರಣ ಮತ್ತು ಬಹಿಃಕರಣ ಎಂಬ ಭೇದಗಳನ್ನು ಹೇಳುತ್ತಾನೆ. [ಅಂತಃಕರಣಂ] ಅಂತಃಕರಣವು [ಬುದ್ಧಿಃ] ಬುದ್ಧಿಯೆಂದು [ಅಹಂಕಾರಚೇತಸೀಚೇತಿ] ಅಹಂಕಾರ ಮತ್ತು ಮನಸ್ಸು ಎಂದು [ತ್ರೇಧಾ] ಮೂರು ವಿಧವಾಗಿದೆ.

ಬಾಹ್ಯಕರಣ ಭೇದ ಮತ್ತು ತನ್ಮಾತ್ರ ವೃತ್ತಿಯನ್ನು ಹೇಳುತ್ತಾನೆ.

[3]ಬುದ್ಧೀಂದ್ರಿಯ ಕರ್ಮೇಂದ್ರಿಯ[3]
ಭೇದಾದ್ಬಾಹ್ಯಂ [4]ಪುನರ್ಭವೇದ್ದಶಧಾ[4] ।
ತನ್ಮಾತ್ರೇಭ್ಯಃ ಖಪವನ
ತೇಜೋಂಭಃ [5]ಕ್ಷಿತಿ[5] ಪಂಚ ಭೂತಾನಿ॥೧೧॥ ೬೦

[ಬಾಹ್ಯಂ ಪುನಃ] ಬಾಹ್ಯಕರಣವಾದರೋ [ಬುದ್ಧೀಂದ್ರಿಯ ಕರ್ಮೇಂದ್ರಿಯ ಭೇದಾತ್] ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯವೆಂಬ ಭೇದದಿಂದ [ದಶಧಾ] ಹತ್ತು ವಿಧವಾಗಿ [ಭವೇತ್] ಆಗುತ್ತದೆ. [ತನ್ಮಾತ್ರೇಭ್ಯಃ] ತನ್ಮಾತ್ರಗಳ ದೆಸೆಯಿಂದ [ಖ ಪವನ ತೇಜೋಂಭಃಕ್ಷಿತಿಪಂಚಭೂತಾನಿ] ಆಕಾಶ, ವಾಯು, ಬೆಂಕಿ, ಜಲ ಮತ್ತು ನೆಲ ಎಂಬ ಐದು ಭೂತಗಳು [ಭವಂತಿ] ಆಗುತ್ತವೆ.

---

1 ತ್ರಿವಿಧಂ (ಗ) 2 ಚೇತನೇ (ಕ) 3 ಕರ್ಮೇಂದ್ರಿಯ ಬುದ್ಧೀಂದ್ರಿಯ (ಕ)
4 ಭವೇತ್ಪುನರ್ದಶಧಾ (ಖ), ಭೇದಾತ್ಪುನರ್ದಶಧಾ (ಗ) 5 ಕ್ಷ್ಮೇತಿ (ಗ)

ಈ ಭೂತಗಳಿಗೆ ಕಾರಣಗಳಾದ ತನ್ಮಾತ್ರಗಳು ಯಾವ ರೂಪದಿಂದಿವೆ ?

ತನ್ಮಾತ್ರಾಣ್ಯವಿಶೇಷಾಃ
ಶಬ್ದಾದೀನಾಂ ಪ್ರಕೀರ್ತಿತಾಃ ಪಂಚ ।
ಭೂತಾನಿ ಪಂಚ ತೇಭ್ಯೋ
ಭವಂತಿ ತಾನ್ಯೇಕಗುಣವೃದ್ಧ್ಯಾ ॥೧೨॥ ೬೧

[ಶಬ್ದಾದೀನಾಂ] ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳ [ಅವಿಶೇಷಾಃ] ಅವ್ಯಕ್ತ ಸೂಕ್ಷ್ಮರೂಪಗಳು [ಪಂಚತನ್ಮಾತ್ರಾಣಿ] ಐದು ತನ್ಮಾತ್ರಗಳೆಂದು [ಪ್ರಕೀರ್ತಿತಾಃ] ಹೇಳಲ್ಪಟ್ಟವು. [ತಾನಿ ಪಂಚಭೂತಾನಿ] ಆ ಆಕಾಶ ಮೊದಲಾದ ಪಂಚಭೂತಗಳು [ತೇಭ್ಯಃ] ಆ ಶಬ್ದಾದಿ ತನ್ಮಾತ್ರಗಳ ದೆಸೆಯಿಂದ [ಏಕಗುಣವೃದ್ಧ್ಯಾ] ಒಂದೊಂದು ಗುಣದ ಹೆಚ್ಚುಗೆಯಿಂದ [ಭವಂತಿ] ಆಗುತ್ತವೆ.

ವಿಚಾರ:—ಶಬ್ದಸ್ಪರ್ಶ ಮೊದಲಾದ ಐದರ ಅವ್ಯಕ್ತಸೂಕ್ಷ್ಮರೂಪಗಳೇ ಪಂಚ ತನ್ಮಾತ್ರಗಳು. 'ಗುಣವಿಶಿಷ್ಟಾಸ್ತನ್ಮಾತ್ರಾಸ್ತನ್ಮಾತ್ರಪದಯೋಜಿತಾಃ" ಎಂಬ ಉಕ್ತಿ ಇದನ್ನೇ ಸಮರ್ಥಿಸಿದೆ. ಇಲ್ಲಿ ತನ್ಮಾತ್ರಗಳೆಂದರೆ ಶ್ರೋತ್ರಾದಿ ಇಂದ್ರಿಯ ಗ್ರಾಹ್ಯವಾದ ಆಕಾಶಾದಿ ಪಂಚಭೂತಗಳ ಕಾರ್ಯಗಳೆನಿಸಿದ ಶಬ್ದಾದಿಗಳಲ್ಲ. ಅದಕ್ಕೆ ಬದಲಾಗಿ ಆ ಭೂತಗಳಿಗೆ ಕಾರಣಗಳಾಗಿರುವ ಅವ್ಯಕ್ತ ಶಬ್ದಾದಿಗುಣಗಳುಳ್ಳ ಸೂಕ್ಷ್ಮರೂಪಗಳೇ ತನ್ಮಾತ್ರಗಳು. ಅಂಥ ಸೂಕ್ಷ್ಮಗಳೂ, ಕಾರಣಗಳೂ, ಆಗಿರುವ ತನ್ಮಾತ್ರಗಳ ದೆಸೆಯಿಂದ ಸ್ಥೂಲ ಪಂಚಭೂತಗಳು ಹುಟ್ಟಿದವು ಎಂಬುದನ್ನು 'ಭೂತಾನಿಪಂಚ" ಎಂದು ಸೂಚಿಸಿದ್ದಾನೆ. ಇಲ್ಲಿ 'ಏಕೈಕ ಗಣವೃದ್ಧ್ಯಾ' ಎಂದರೆ ಶಬ್ದವೆಂಬ ಒಂದು ಗುಣವುಳ್ಳದ್ದು ಆಕಾಶ; ಶಬ್ದ, ಸ್ಪರ್ಶ ಎಂಬ ಎರಡು ಗುಣಗಳುಳ್ಳದ್ದು ವಾಯು, ಶಬ್ದ-ಸ್ಪರ್ಶ-ರೂಪವೆಂಬ ಮೂರು ಗುಣಗಳುಳ್ಳದ್ದು ಅಗ್ನಿ, ಶಬ್ದ-ಸ್ಪರ್ಶ-ರೂಪ ಎಂಬ ನಾಲ್ಕು ಗುಣಗಳುಳ್ಳದ್ದು ಜಲ, ಶಬ್ದ-ಸ್ಪರ್ಶ-ರೂಪ, ರಸ ಮತ್ತು ಗಂಧ ವೆಂಬ ಐದು ಗುಣಗಳುಳ್ಳದ್ದು ಪೃಥಿವಿ ಎಂದು ತಾತ್ಪರ್ಯ. ಇದನ್ನೇ ಮೃಗೇಂದ್ರಾಗಮದಲ್ಲಿ

ಇತಿ ಪಂಚಸು ಶಬ್ದೋ(ಽ)ಖಿಯಂ ಸ್ಪರ್ಶೋ(ಽ) ಭೂತಚತುಷ್ಟಯೇ
ಅಶೀತೋಷ್ಣೌ ಮಹೀವಾಯೋಃ ಶೀತೋಷ್ಣೌ ವಾರಿತೇಜಸೋಃ ।
ಭಾಸ್ವದಗ್ನೌ ಜಲೇಶುಕ್ಲಂ ಕ್ಷಿತೌ ಶುಕ್ಲಾದ್ಯನೇಕಧಾ
ರೂಪಂ ತ್ರಿಷು ರಸೋ(ಽ)ಂಭಸ್ಸು ಮಧುರಃ ಷಡ್ವಿಧಃ ಕ್ಷಿತೌ ॥
ಗಂಧಂ ಕ್ಷಿತಾವಸುರಭಿಃ ಸುರಭಿಶ್ಚಮತೋ ಬುಧೈಃ

ಎಂದು ಹೇಳಿದೆ.

ತಾಮಸತೋ ಭೂತಾದೇರಹಂಕೃತೇರ್ಭವತಿ ಶಬ್ದತನ್ಮಾತ್ರಮ್ ।
ತಸ್ಮಾದಪಿ ತನ್ಮಾತ್ರಾದಾಕಾಶಃ ಸ್ಪರ್ಶತನ್ಮಾತ್ರಃ ॥
ರೂಪರಸಗಂಧ ಮಾತ್ರಂ ಪವನಾದ್ಯೈಃ ಸಹ ಯಥೋತ್ತರಂ ಭವತಿ।
ಪೂರ್ವಸ್ಮಾತ್ ತನ್ಮಾತ್ರಾತ್ ಕೇವಲತೋ ಗಂಧತಃ ಪೃಥಿವೀ ॥

ಪಂಚಭೂತಗಳ ವ್ಯಾಪಾರಗಳನ್ನು ಹೇಳುತ್ತಾನೆ.

ಅವಕಾಶವ್ಯೂಹನ [1]ಪಾಕ[1]
ಸಂಗ್ರಹಧಾರಣಂ ಕ್ರಮಾದೇಷಾಮ್ ।
ವ್ಯಾಪಾರಾ ಭೂತಾನಾಂ
ವ್ಯೋಮಾದೀನಾಂ[2] ಸಮುದ್ದಿಷ್ಟಾಃ[2] ॥೧೪॥ ೬೨

(ಅವಕಾಶ-ವ್ಯೂಹನ-ಪಾಕ-ಸಂಗ್ರಹ-ಧಾರಣಂ) ಅವಕಾಶ-ತೆರವು ಮಾಡಿ ಕೊಡುವುದು, ವ್ಯೂಹನ-ಅವಯವಗಳನ್ನು ಗಟ್ಟಿಮಾಡುವುದು, ಪಾಕ-ಬೇಯಿಸುವುದು, ಸಂಗ್ರಹಣ-ಮುದ್ದೆ ಮಾಡುವುನು, ಧಾರಣಂ-ಧರಿಸಿಕೊಳ್ಳುವುದು ಎಂಬಿವು (ಕ್ರಮಾತ್) ಕ್ರಮವಾಗಿ (ವ್ಯೋಮಾದೀನಾಂ) ಆಕಾಶ ಮೊದಲಾದ (ಏಷಾಂ ಭೂತಾನಾಂ) ಈ ಭೂತಗಳ (ವ್ಯಾಪಾರಾಃ) ಉದ್ಯೋಗಗಳೆಂದು [ಸಮುದ್ದಿಷ್ಟಾಃ] ಹೇಳಲ್ಪಟ್ಟಿವೆ.

ತತ್ತ್ವಪ್ರಕಾಶಿಕೆಯಲ್ಲಿ ಅಶುದ್ಧ ವರ್ಗನಿರ್ಣಯವೆಂಬ
ಚತುರ್ಥ ಪರಿಚ್ಛೇದ ಮುಗಿದುದು.

[1]ಪಾಚನ (ಗ) [2]ಸಮುದ್ದಿಷ್ಟಾಃ (ಗ)

# ಪಂಚಮ ಪರಿಚ್ಛೇದ

ಈ ತನ್ಮಾತ್ರಗಳು ಮತ್ತು ಭೂತಗಳೂ ಸಹ ಇಂದ್ರಿಯಗಳಿಗೆ ಆಧಾರವಾಗಿವೆ ಎಂದು ಹೇಳುತ್ತಾನೆ.

ಕಾರ್ಯಮಿದಂ ದಶಧಾ ಯ-
ತ್ತತ್ಕರಣೈಃ ಕಾರ್ಯತೇ ಸಮಾವಿಶ್ಯ ।
ಕರಣಾನ್ಯಸಮರ್ಥತ್ವಾತ್
ಕಾರ್ಯಂ ಸಂಶ್ರಿತ್ಯ ಚೇಷ್ಟಂತೇ ॥೧॥ ೬೩

[ಕಾರ್ಯಂ] ಕಾರ್ಯರೂಪವಾಗಿರುವ [ದಶಧಾ] ಹತ್ತು ವಿಧವಾದ [ಯದಿದಂ] ಯಾವ ಈ ತನ್ಮಾತ್ರ ಪಂಚಕ ಮತ್ತು ಭೂತ ಪಂಚಕವುಂಟೊ [ತತ್] ಅದು [ಕರಣೈಃ] ಶ್ರೋತ್ರಾದಿ ಕರಣಗಳೊಡನೆ [ಸಮಾವಿಶ್ಯ] ಕೂಡಿ [ಕಾರ್ಯತೇ] ವ್ಯಾಪಾರ ಮಾಡುತ್ತದೆ. [ಕರಣಾನಿ] ಶ್ರೋತ್ರ ಮೊದಲಾದ ಕರಣಗಳು [ಅಸಮರ್ಥತ್ವಾತ್]ತಾವೇ ಶಬ್ದಾದಿಗಳನ್ನು ಅನುಗ್ರಹಿಸುವ ವಿಷಯದಲ್ಲಿ ಅಸಮರ್ಥಗಳಾದ್ದರಿಂದ [ಕಾರ್ಯಂ] ತನ್ಮಾತ್ರರೂಪ ಕಾರ್ಯವನ್ನು (ಸಂಶ್ರಿತ್ಯ) ಆಶ್ರಯಿಸಿ [ಚೇಷ್ಟಂತೇ] ತಮ್ಮ ವ್ಯಾಪಾರಗಳನ್ನು ಮಾಡುತ್ತವೆ.

ವಿಚಾರ:—ತನ್ಮಾತ್ರಗಳು ಮತ್ತು ಭೂತಗಳೂ ಕೂಡ ರತ್ನಕ್ಕೆ ಚಿನ್ನದ ಬೆಸುಗೆ [ಕುಂದಣ] ಯಂತೆ ಇಂದ್ರಿಯಗಳಿಗೆ ಆಧಾರವಾಗಿದ್ದು, ಆ ಇಂದ್ರಿಯಗಳಿಂದ ಶಬ್ದ ಮೊದಲಾದ ವಿಷಯಗ್ರಹಣವನ್ನು ಮಾಡಿಸುತ್ತವೆ ಎಂದು ತಾತ್ಪರ್ಯ.

ಈಗ ಇದುವರೆಗೆ ಹೇಳಿದ ಮೂವತ್ತಾರು ತತ್ತ್ವಗಳನ್ನು ಸಾಧರ್ಮ್ಯದಿಂದ ವರ್ಣಿಸುತ್ತಿದ್ದಾನೆ.

ಪಂಚಾನಾಮಾದ್ಯಾನಾಂ
ಚಿದ್ರೂಪತಯಾನ್ವಯಃ ಪರೇಷಾಂತು ।
ಮಾಯಾದ್ಯಾನಾಂ ದ್ವೇಧಾ
ಸಪ್ತಾನಾಂ ಕೀರ್ತಿತಃ ಶೈವೇ ॥೨॥ ೬೪

[ಆದ್ಯಾನಾಂ] ಮೊದಲನೆಯ [ಪಂಚಾನಾಂ] ಶಿವತತ್ತ್ವ ಮೊದಲಾದ ಐದು ತತ್ತ್ವಗಳಿಗೆ [ಚಿದ್ರೂಪತಯಾ] ಚಿದ್ರೂಪವೆಂಬ [ಅನ್ವಯಃ] ಸಂಬಂಧವು ಎಂದರೆ ಶಿವಮೊದಲು ವಿದ್ಯಾತತ್ತ್ವದವರೆಗೆ ಇರುವ ಐದು ತತ್ತ್ವಗಳು ತಮ್ಮಲ್ಲಿರುವ ಭುವನಗಳನ್ನು ಹೊಂದಿದ ಜೀವರಿಗೆ ಸರ್ವಜ್ಞತ್ವ ಮತ್ತು ಸರ್ವಕರ್ತೃತ್ವ ಪ್ರಕಟನೆಗೆ ಸಾಧನಗಳಾಗಿರುವುದರಿಂದ ಅವು ಚಿದ್ರೂಪಗಳೆನಿಸಿವೆ. [ಪರೇಷಾಂ] ಬೇರೆಯಾದ [ಮಾಯಾದೀನಾಂ ಸಪ್ತಾನಾಂ ತು] ಮಾಯೆಯಿಂದ ಪುರುಷ ತತ್ತ್ವದವರೆಗೆ ಇರುವ ಏಳಕ್ಕಾದರೋ [ದ್ವೇಧಾ] ಜೀವರಿಗೆ ಕಿಂಚಿಜ್ಞತ್ವ ಮತ್ತು ಕಿಂಚಿತ್ಕರ್ತೃತ್ವವನ್ನು ಪ್ರಕಟಿಸುವುದರಿಂದಲೂ, ಚಿದುಪಕಾರಿತ್ವದಿಂದಲೂ ಮತ್ತು ಸುಖ, ದುಃಖ ಮತ್ತು ಮೋಹವನ್ನು ಹುಟ್ಟಿಸುವುದರಿಂದಲೂ ಕೂಡ ಇವುಗಳಿಗೆ ಎರಡು ವಿಧವಾದ [ಅನ್ವಯಃ] ಸಂಬಂಧವು [ಶೈವೇ] ಶಿವಾಗಮದಲ್ಲಿ [ಕೀರ್ತಿತಃ] ಹೇಳಲ್ಪಟ್ಟಿದೆ.

ಅವ್ಯಕ್ತಪ್ರಭೃತೀನಾಂ
ಗುಣೈಶ್ಚ ಸುಖದುಃಖ ಮೋಹರೂಪತಯಾ ।
ಅನ್ವಯ ಇಹ ನಿಖಿಲಾನಾಂ
ದಶಕೇ ಹ್ಯಂತೇ ವಿಶೇಷೋಽಯಮ್ ॥೩॥ ೬೫

(ಇಹ) ಇಲ್ಲಿ (ಅವ್ಯಕ್ತಪ್ರಭೃತೀನಾಂ) ಪ್ರಕೃತಿ ಮೊದಲಾದ (ನಿಖಿಲಾನಾಂ) ಎಲ್ಲ ತತ್ತ್ವಗಳಿಗೆ (ಗುಣೈಃ) ಗುಣಗಳಿಂದ (ಸುಖ ದುಃಖ ಮೋಹರೂಪತಯಾ] ಸುಖ ದುಃಖ ಮತ್ತು ಮೋಹಗಳನ್ನು ಹುಟ್ಟಿಸುವುದರಿಂದ [ಅನ್ವಯಃ] ಸಂಬಂಧವು [ಅಂತೇ] ಕಡೆಯಲ್ಲಿರುವ [ದಶಕೇ] ತನ್ಮಾತ್ರ ಮತ್ತು ಭೂತಗಳೆಂಬ ಹತ್ತರಲ್ಲಿದೆ [ಅಯಂ ವಿಶೇಷಃ] ಇದು ವಿಶೇಷ.

ಆ ವಿಶೇಷವು ಯಾವುದೆಂದರೆ—

ಶಬ್ದಾದೌ[1] ಗುಣಸಾಮ್ಯೇ
[2]ತುಲ್ಯತ್ವೇ[2] ಚಾನ್ವಯೋಽತ್ರ ವಿಜ್ಞೇಯಃ ।
ಅಂಗಾಂಗಿಭಾವವಿಹಿತೋ
ಭವತಿ [3]ವಿಶೇಷಸ್ತು[3] ಕೇಷಾಂಚಿತ್ ॥೪॥ ೬೬

---

1 ಶಬ್ದಾದಿಕಃ (ಕ) 2 ತುಲ್ಯತ್ವೇನಾನ್ವಯೋ (ಗ) 3 ವಿಶೇಷಶ್ಚ (ಖ)

[ಶಬ್ದಾದೌ] ಶಬ್ದ ತನ್ಮಾತ್ರ ಮೊದಲು ಪೃಥ್ವಿಯವರೆಗೆ ಇರುವ ಹತ್ತರಲ್ಲಿ [ಗುಣಸಾಮ್ಯೇ] ಶಬ್ದ ಮೊದಲಾದವುಗಳ ಗುಣಸಾಮ್ಯದಲ್ಲಿ (ತುಲ್ಯತ್ವೇ ಚ) ಕಾರ್ಯಗಳ ಸಮಾನತ್ವದಲ್ಲಿ (ಅತ್ರ) ಇಲ್ಲಿ (ಅನ್ವಯಃ) ಸಾಧರ್ಮ್ಯವು (ವಿಜ್ಞೇಯಃ) ತಿಳಿಯತಕ್ಕದ್ದು. (ಕೇಷಾಂಚಿತ್) ಕೆಲವು ಬಿಂದು ಮಾಯಾ ಮೊದಲಾದ ತತ್ತ್ವಗಳಿಗೆ (ಅಂಗಾಂಗಿಭಾವವಿಹಿತಃ) ಅಮುಖ್ಯ ಮತ್ತು ಮುಖ್ಯತ್ವದಿಂದ ಮಾಡಲ್ಪಟ್ಟ ಭಾವಸರ್ಗ ಎಂಬ (ವಿಶೇಷಶ್ಚ) ವಿಶೇಷವೂ ಸಹ (ಭವತಿ) ಆಗುತ್ತದೆ.

ವಿಚಾರ—ಇಲ್ಲಿ ಬಿಂದು ಮಾಯೆ ಮತ್ತು ಪ್ರಕೃತಿಗಳು ಕಾರಣ ರೂಪಗಳಾದ್ದರಿಂದ ಮುಖ್ಯ ಅಂದರೆ 'ಅಂಗಿ' ಎಂದು ತಿಳಿಯಬೇಕು. ಶಕ್ತಿತತ್ತ್ವ ಮೊದಲಾದ ನಾಲ್ಕು ತತ್ತ್ವಗಳು, ಕಲಾತತ್ತ್ವ ಮೊದಲಾದ ಐದು ತತ್ತ್ವಗಳು, ಗುಣತತ್ತ್ವ ಮೊದಲಾದ ೨೪ ತತ್ತ್ವಗಳೂ ಸಹ ಸಹಕಾರಿಗಳಾದ್ದರಿಂದ ಅಮುಖ್ಯ, ಎಂದರೆ 'ಅಂಗ' ವೆಂದು ತಿಳಿಯಬೇಕು.

ಹೀಗೆ ತತ್ತ್ವಗಳ ಸೃಷ್ಟಿಕ್ರಮ ಮತ್ತು ಸ್ಥಿತಿಯನ್ನು ಹೇಳಿ ತತ್ತ್ವಲಕ್ಷಣವನ್ನು ಉಪಸಂಹರಿಸುತ್ತಿದ್ದಾನೆ.

ತತ್ತ್ವಾನಾಂ ಸ್ಥಿತಿರೇಷಾ
ಕಥಿತಾ ಸೃಷ್ಟಿಕ್ರಮೇಣ ಸರ್ವೇಷಾಮ್ ।
ಪ್ರತಿಲೋಮಂ ಪರಿಣಾಮಾ-
ನ್ಮಾಯಾಯಾಂ ತಾನಿ ಲೀಯಂತೇ ॥೫॥ ೬೭

(ಸರ್ವೇಷಾಂ) ಸಮಸ್ತವಾದ (ತತ್ತ್ವಾನಾಂ) ತತ್ತ್ವಗಳಿಗೆ (ಸೃಷ್ಟಿಕ್ರಮೇಣ) ಉತ್ಪತ್ತಿ ಕ್ರಮದಿಂದ (ಏಷಾಸ್ಥಿತಿಃ) ಈ ಸ್ಥಿತಿಯು (ಕಥಿತಾ) ಹೇಳಲ್ಪಟ್ಟಿತು. ಇನ್ನು ಸಂಹಾರ ಕ್ರಮವನ್ನು ಹೇಳುತ್ತಾನೆ—(ತಾನಿ) ಆ ಕಾಲಾದಿ ತತ್ತ್ವಗಳು [ಪ್ರತಿಲೋಮಂ] ತುದಿ ಮೊದಲುಗೊಂಡು (ಪರಿಣಾಮಾತ್) ಪರಿಣಾಮದ ದೆಸೆಯಿಂದ (ಮಾಯಾಯಾಂ) ಮಾಯೆಯಲ್ಲಿ (ಲೀಯಂತೇ) ಅಡಗಿರುತ್ತವೆ.

ಮಾಯೆಯ ತರುವಾಯ ಇರುವ ತತ್ತ್ವಗಳ ಲಯವು ಎಲ್ಲಿ ಎಂಬುದನ್ನು ಹೇಳುತ್ತಾನೆ.

ಮಾಯಾಯಾಃ ಪರತೋಽಧ್ವಾ
ಶುದ್ಧಃ ಶಕ್ತೌ ನಿಲೀಯತೇ ಸಕಲಃ ।
ಪರಮಾತ್ಮನಿ[1] ಸಾಪಿ ಶಿವೇ
ತಿಷ್ಠತ್ಯವಿಭಾಗಮಾಪನ್ನಾ ॥೬॥ ೭೮

(ಮಾಯಾಯಾಃ) ಮಾಯೆಯ ದೆಸೆಯಿಂದ (ಪರತಃ) ಅನ್ಯವೂ (ಶುದ್ಧಃ) ಶುದ್ಧವೂ (ಸಕಲಃ) ಸಕಲವೂ ಆದ (ಅಧ್ವಃ) ಮಾರ್ಗವು (ಶಕ್ತೌ) ಮಹಾಮಾಯೆಯೆಂಬ ಶಕ್ತಿಯಲ್ಲಿ (ನಿಲೀಯತೇ) ಅಡಗುತ್ತದೆ (ಸಾಪಿ) ಆ ಮಹಾ ಮಾಯೆಯೂ, ಅಪಿಶಬ್ದದಿಂದ ಅದೇ ಮಾಯೆಯೆಂದು ಅರ್ಥ. ಪರಮಾತ್ಮನಿ ಶಿವೇ-ಪರಮಾತ್ಮನಾದ ಶಿವನಲ್ಲಿ, ಸಾ-ಆಶಕ್ತಿಯು, ಅವಿಭಾಗಮಾಪನ್ನಾ-ಅಪೃಥಕ್‌ಭಾವವನ್ನು 'ತಾದಾತ್ಮ್ಯ'ವನ್ನು ಹೊಂದಿ 'ತಿಷ್ಠತಿ'-ಇರುತ್ತದೆ.

ವಿಚಾರ—ಇಲ್ಲಿ ತತ್ತ್ವಗಳು ಪ್ರತಿಲೋಮದಿಂದ ಮಾಯೆಯಲ್ಲಿ ಅಡಗುತ್ತವೆ. ಎಂಬುದಕ್ಕೆ ವಿವರವು ಹೀಗೆ—ಪೃಥ್ವೀತತ್ತ್ವವು ತನಗೆ ಕಾರಣವಾದ ಗಂಧತನ್ಮಾತ್ರದಲ್ಲಿ, ಜಲವು ರಸತನ್ಮಾತ್ರದಲ್ಲಿ, ಅಗ್ನಿಯು ರೂಪತನ್ಮಾತ್ರದಲ್ಲಿ, ವಾಯುವು ಸ್ಪರ್ಶತನ್ಮಾತ್ರದಲ್ಲಿ, ಆಕಾಶವು ಶಬ್ದತನ್ಮಾತ್ರದಲ್ಲಿಯೂ ಅಡಗುವವು. ಈ ಪಂಚ ತನ್ಮಾತ್ರಗಳು ತಮಗೆ ಕಾರಣವಾದ ತಾಮಸಾಹಂಕಾರದಲ್ಲಿಯೂ, ಕರ್ಮೇಂದ್ರಿಯಗಳು ರಾಜಸಾಹಂಕಾರದಲ್ಲಿಯೂ, ಮನಸ್ಸು ಮತ್ತು ಜ್ಞಾನೇಂದ್ರಿಯಗಳು ಸಾತ್ವಿಕಾಹಂಕಾರದಲ್ಲಿಯೂ ಅಡಗುವವು. ಅಹಂಕಾರವು ಬುದ್ಧಿಯಲ್ಲಿ, ಬುದ್ಧಿಯು ಗುಣತತ್ತ್ವದಲ್ಲಿ; ಗುಣತತ್ತ್ವ ಮತ್ತು ಶುದ್ಧವಿದ್ಯಾ-ಈಶ್ವರ, ಸದಾಶಿವ-ಶಕ್ತಿತತ್ತ್ವಗಳು ಶಿವತತ್ತ್ವದಲ್ಲಿಯೂ ಅಡಗುವವು. ಈ ಶಿವತತ್ತ್ವವೂ ಆ ಶುದ್ಧಮಾಯಾತತ್ತ್ವವೂ ಪರಶಿವನು ನಿಮಿತ್ತ ಕಾರಣನಾಗಿ ಅಧಿಷ್ಠಿಸಿ ಕೊಂಡಿರಲು ಅಲ್ಲಿ ನಿರವಯವ ರೂಪದಿಂದ ಇರುತ್ತವೆ.

---

[1]ಸರ್ವಾತ್ಮನಿ (ಗ)

ಗಂಧೇ ಭೂಃ ಸಲಿಲಂ ರಸೇ ಹುತವಹೋ ರೂಪೇ ಮರುತ್ಸ್ಪರ್ಶನೇ
ಶಬ್ದೇಸ್ಯಾತ್ತ್ವಮಹಂಕೃತೌ ಪುನರಿಮಾಸ್ತನ್ಮಾತ್ರಿಕಾಸ್ತಾಮಸೇ ।
ಕರ್ಮಾಕ್ಷಾಣಿ ಚ ರಾಜಸೇ ಸಹ ಮನೋಬುದ್ಧೀಂದ್ರಿಯೈಃ ಸಾತ್ವಿಕೇ
ಬುದ್ಧೌ ತಚ್ಚ ಗುಣೇಷು ಸಾ ಗುಣಗಣೋಽವ್ಯಕ್ತೇ ಲಯಂ ಗಚ್ಛತಿ ॥
ತದ್ರಾಗವಿದ್ಯೇ ಚ ಕಲಾಂ ಪ್ರಯಾಂತಿ
ಪುಂಸ್ತ್ವಂ ಚ ಕಾಲೋ ನಿಯತಿಃ ಕಲಾ ಚ ।
ಮಾಯಾ ಸುವಿದ್ಯೇಶಮಸೌ ಸ ದೇಶಂ
ಸ ಶಕ್ತಿ ಮೇಷಾ ಶಿವಮೇಷ ಬಿಂದುಃ ॥

ಇಲ್ಲಿ "ಶಿವ" ಎಂದರೆ ಶಾಂತಿಕಲಾ ಮಸ್ತಕದಲ್ಲಿರುವ "ಶಾಂತ್ಯತೀತ ಭುವನ" ಎಂದು ತಿಳಿಯಬೇಕು.

ಇನ್ನು ಮಹಾ ಪ್ರಳಯದಲ್ಲಿ ಉಳಿದಿರುವ ವಸ್ತುಗಳನ್ನು ಹೇಳುತ್ತಾನೆ.

ಮಾಯಾಪುರುಷಶ್ಶಿವ ಇ-
ತ್ಯೇತತ್ತ್ರಿತಯಂ ಮಹಾರ್ಥಸಂಹಾರೇ ।
ಅವಶಿಷ್ಯತೇ ಪುನಸ್ತ-
ತ್ಪ್ರವರ್ತತೇ ಪೂರ್ವವತ್ಸೃಷ್ಟೌ ॥೭॥ ೭೯

(ಮಾಯಾ) ತಂತ್ರೋಚ್ಚಾರಣದಿಂದ ಮಾಯೆ ಮತ್ತು ಮಹಾ ಮಾಯೆಗಳು ಎಂಬ ಎರಡು ಉಪಾದಾನಕಾರಣಗಳು (ಪುರುಷಃ) ಜಾತ್ಯೇಕವಚನವಾದ ಪುರುಷ ಶಬ್ದದಿಂದ ಮಲಯುಕ್ತರಾದ ಸಮಸ್ತ ಬದ್ಧಾತ್ಮರು, (ಶಿವಃ) ಶಕ್ತಿ ಯುಕ್ತನಾದ ಶಿವ ಮತ್ತು ಶಿವಶಬ್ದದಿಂದ ಹೇಳಿಸಿಕೊಳ್ಳುವ ಮುಕ್ತಾತ್ಮರೂ ಸಹ (ಇತಿ) ಹೀಗೆ (ಏತತ್ತ್ರಿತಯಂ) ಈ ಮೂರು ಮಹಾರ್ಥಸಂಹಾರೇ ಮಹಾ ಪ್ರಳಯದಲ್ಲಿ (ಅವಶಿಷ್ಯತೇ) ಉಳಿದಿರುತ್ತದೆ. (ಪುನಃ) ಮತ್ತೆ (ಸೃಷ್ಟೌ) ಸೃಷ್ಟಿಕಾಲದಲ್ಲಿ (ತತ್) ಆ ಮೂರು (ಪೂರ್ವವತ್) ಮೊದಲಿನಂತೆ (ಪ್ರವರ್ತತೇ) ಪ್ರವರ್ತಿಸುತ್ತದೆ.

ವಿಚಾರ—ಮಹಾಪ್ರಳಯದಲ್ಲಿ ಮೂರು ತತ್ತ್ವಗಳು ಮಾತ್ರ ಉಳಿಯಲು ಕಾರಣವೇನೆಂದರೆ ಮಧ್ಯಮಪ್ರಳಯದಲ್ಲಿ ಮೂರು ಲೋಕಗಳು ಲಯವಾಗುತ್ತವೆ. ಸಾಮಾನ್ಯ ಪ್ರಳಯದಲ್ಲಿ ಗುಣಗಳು ಲಯವಾಗುತ್ತವೆ. ಮಹಾಪ್ರಳಯದಲ್ಲಿ ವಿದ್ಯೇಶಾದಿಗಳಿಗೂ ಕೂಡ ಮೋಕ್ಷವಾಗುವುದರಿಂದ ಉಳಿಯುವವು ಈ ಮೂರು ತತ್ತ್ವಗಳು ಮಾತ್ರ

ಮಹಾ ಸಂಹಾರಕ್ಕೆ ಪ್ರಯೋಜನವನ್ನು ಹೇಳುತ್ತಾನೆ.

ಸಂಸಾರೇ ಖಿನ್ನಾನಾಂ
ನಿಖಿಲಾನಾಂ ಪ್ರಾಣಿನಾಂ ಪ್ರಭುಃ ಕೃಪಯಾ ।
ಕುರುತೇ ಮಹಾರ್ಘಸಂಹೃತಿ
ಮೇತೇಷಾಮೇವ ವಿಶ್ರಾಂತ್ಯೈ ॥ಆ॥ ೭೦

(ಪ್ರಭುಃ) ಪರಮೇಶ್ವರನು (ಸಂಸಾರೇ) ಜಗತ್ತಿನಲ್ಲಿ (ಖಿನ್ನಾನಾಂ) ನೊಂದಿರುವ (ನಿಖಿಲಾನಾಂ) ಸಮಸ್ತವಾದ (ಏತೇಷಾಂ ಪ್ರಾಣಿನಾಂ) ಈ ಪ್ರಾಣಿಗಳ (ವಿಶ್ರಾಂತ್ಯೈಏವ) ಬಳಲಿಕೆಯನ್ನು ಕಳೆಯಲಿಕ್ಕಾಗಿಯೇ (ಕೃಪಯಾ) ದಯೆಯಿಂದ (ಮಹಾರ್ಘಸಂಹೃತಿಂ) ಮಹಾ ಪ್ರಳಯವನ್ನು (ಕುರುತೇ) ಮಾಡುತ್ತಾನೆ.

ತತ್ತ್ವಪ್ರಕಾಶಿಕೆಯುಲ್ಲಿ ಸಾಮಾನ್ಯ ವಾದವೆಂಬ
ಪಂಚಮ ಪರಿಚ್ಛೇದ ಮುಗಿದುದು.

## ಷಷ್ಠ ಪರಿಚ್ಛೇದ

**ಪ್ರಳಯವಾದಮೇಲೆ ಮತ್ತೆ ಸೃಷ್ಟಿಗೆ ಪ್ರಯೋಜನವೇನು ? ಎಂದರೆ—**

ಕರ್ಮವಿಪಾಚನ ಹೇತೋಃ

ಪಶುದಯಯಾ ಪುನರಪೀಹ ಪರಮೇಶಃ ।

ಸೃಷ್ಟಿಂ ವಿಧಾಯ ತೇಷಾಂ

[1]ಕರ್ಮವಿಪಾಚಯತಿ[1] ದೇಹಭೃತಾಮ್ ॥೧॥ ೭೧

(ಕರ್ಮವಿಪಾಚನಹೇತೋಃ) ಕರ್ಮಪರಿಪಾಕಕ್ಕೋಸ್ಕರ (ಪಶುದಯಯಾ) ಪಶು-ಜೀವಿಗಳ ಮೇಲಿನ ಕೃಪೆಯಿಂದ (ಪರಮೇಶಃ) ಪರಮೇಶ್ವರನು (ಇಹ) ಇಲ್ಲಿ (ಪುನರಪಿ) ಮತ್ತೆ (ಸೃಷ್ಟಿಂ) ಸೃಷ್ಟಿಯನ್ನು (ವಿಧಾಯ) ಮಾಡಿ (ತೇಷಾಂ ದೇಹಭೃತಾಂ) ಆ ಜೀವಿಗಳ (ಕರ್ಮ) ಕರ್ಮವನ್ನು (ಪಾಚಯತಿ) ಭೋಗಿಸುವುದಕ್ಕೆ ಯೋಗ್ಯರನ್ನಾಗಿ ಮಾಡುತ್ತಾನೆ.

**ತರುವಾಯಃ ಕ್ರಮವಾಗಿ ಮಲವು ಪರಿಪಾಕವಾಗುತ್ತಿರಲು—**

ಭೋಗೇನ [2]ಕರ್ಮನಾಶಂ[2]

ವಿಧಾಯ [3]ದೀಕ್ಷಾಖ್ಯಯಾ[3] ಶಕ್ತ್ಯಾ ।

ಮೋಚಯತಿ ಪಶೂನಖಿಲಾನ್

ಕರುಣೈಕನಿಧಿಃ ಸದಾ ಶಂಭುಃ ॥೨॥ ೭೨

(ಕರುಣೈಕನಿಧಿಃ) ಕರುಣೆಗೆ ಗಣಿಯಾಗಿರುವ (ಶಂಭುಃ) ಪರಮೇಶ್ವರನು (ಭೋಗೇನ) ಭೋಗದಿಂದ (ಕರ್ಮನಾಶಂ) ಕರ್ಮಕ್ಷಯವನ್ನು (ವಿಧಾಯ) ಮಾಡಿ (ದೀಕ್ಷಾಖ್ಯಯಾ) ದೀಕ್ಷೆ ಎಂಬ ಹೆಸರುಳ್ಳ (ಶಕ್ತ್ಯಾ) ಶಕ್ತಿಯಿಂದ (ಅಖಿಲಾನ್) ಸಮಸ್ತ (ಪಶೂನ್) ಜೀವಿಗಳನ್ನು (ಸದಾ) ಯಾವಾಗಲೂ (ಮೋಚಯತಿ) ಪಾಶದಿಂದ ಬಿಡುಗಡೆ ಮಾಡುತ್ತಾನೆ.

**ವಿಚಾರಃ**—ಕರ್ಮವನ್ನು ಅನುಭವಿಸುವುದರಿಂದ ಮಲವು ಪರಿಪಕ್ವ

---

[1]ಕರ್ಮಕ್ಷೇತ್ರ ಪಾಚಯತಿ (ಗ) [2]ಕರ್ಮನಾಶಂ (ಗ) [3]ದೀಕ್ಷಾಂ ಶಿವ ಶಕ್ತ್ಯಾ (ಗ)

ವಾಗುತ್ತದೆ. ಈ ಪಾಕವು ಸಂಚಿತ ಮತ್ತು ಆಗಾಮಿ ಕರ್ಮಗಳಿಗೆ ಅನ್ವಯಿಸುತ್ತದೆ. ಆಚಾರ್ಯನು ಮಾಡುವ ದೀಕ್ಷಾರೂಪಕ್ರಿಯೆಯಿಂದ ಈ ಉಭಯ ಕರ್ಮಗಳೂ ನಾಶವಾಗುತ್ತವೆ. ಆಗ ಶಿವನು ಮಲಾದಿಪಾಶಗಳಿಂದ ಜೀವಿಗಳನ್ನು ಬಿಡಿಸುತ್ತಾನೆ ಎಂದು ಅರ್ಥ. ಇದನ್ನೇ ಕಿರಣಾಗಮದಲ್ಲಿ "ಅನೇಕ ಭವಿಕಂ ಕರ್ಮ ದಗ್ಧಬೀಜಮಿವಾಣುಭಿಃ । ಭವಿಷ್ಯದಪಿ ಸಂರುದ್ಧಂ ಯೇನೇದಂ ತದ್ಧಿ ಭೋಗದಮ್" ಎಂದು ಹೇಳಲಾಗಿದೆ. ಆದ್ದರಿಂದಲೇ ಸದ್ಯೋನಿರ್ವಾಣದೀಕ್ಷೆಯಿಂದ ಪ್ರಕೃತ ಇರುವ ಶರೀರಕ್ಕೆ ಕಾರಣವಾದ ಆರಬ್ಧಕರ್ಮವೂ ನಾಶವಾಗುತ್ತದೆಯೆಂದು ಸಿದ್ಧಪಡಿಸಲಾಗಿದೆ.

ಶರೀರ ಮೊದಲಾದವುಗಳನ್ನು ತತ್ತ್ವಗಳೆಂದು ಏಕೆ ಹೇಳಲಿಲ್ಲ? ಎಂದರೆ—

ಆಪ್ರಳಯಂ [1]ಯತ್ತಿಷ್ಠತಿ[1]
ಸರ್ವೇಷಾಂ ಭೋಗದಾಯಿ ಭೂತಾನಾಮ್ ।
ತತ್ತತ್ತ್ವಮಿತಿ ಪ್ರೋಕ್ತಂ
ನ ಶರೀರಘಟಾದಿ ತತ್ತ್ವಮತಃ ॥೩॥ ೭೩

(ಯತ್) ಯಾವ ವಸ್ತುವು (ಆಪ್ರಳಯಂ) ಮಹಾಪ್ರಳಯದ ವರೆಗೆ (ತಿಷ್ಠತಿ) ಇರುತ್ತದೆಯೋ (ಸರ್ವೇಷಾಂ) ಸಮಸ್ತ (ಭೂತಾನಾಂ) ಪ್ರಾಣಿಗಳಿಗೆ (ಭೋಗದಾಯಿ) ಭೋಗವನ್ನು ಕೊಡುವ (ತತ್) ಅದು (ತತ್ತ್ವಂ) ತತ್ತ್ವವೆಂದು (ಇಹ) ಈ ಶಿವಾಗಮದಲ್ಲಿ (ಪ್ರೋಕ್ತಂ) ಹೇಳಲ್ಪಟ್ಟಿದೆ. (ಅತಃ) ಈ ಕಾರಣದಿಂದ (ಶರೀರಘಟಾದಿ) ಶರೀರ ಘಟ ಮೊದಲಾದವು (ನ ತತ್ತ್ವಂ) ತತ್ತ್ವವಲ್ಲ.

ಈ ತತ್ತ್ವಗಳನ್ನು ಸಂಹಾರಕ್ರಮದಿಂದ ಹೀಗೆ ಸಂಗ್ರಹಿಸಲಾಗಿದೆ.

ಭೂವಾರ್ಯಗ್ನಿಮರುತ್ಖಗಂಧರಸರೂಪಸ್ಪರ್ಶಶಬ್ದಾನ್ಖಗಂ
ಪಾಯೂಪಾದಕರಾಸ್ಯ ನಾಸಿರಸನಾದೃಕ್ತ್ವಕ್ ಶ್ರುತಿರ್ಮಾನಸಮ್ ।
ಗರ್ವಂ ಧೀಗುಣಮಾತ್ರರಾಗ ಪುರುಷಾನ್ವಿದ್ಯಾನಿ ಮತ್ಯಾಕಲಾಂ
ಕಾಲಂ ಮೋಹಕಬೋಧಕೇಶ್ವರ ಸದೇಶಚ್ಛಕ್ತಿಮಾದೇ ಶಿವಮ್ ॥

[1] ತಿಷ್ಠತಿ ಯತ್ (ಗ)

"ಅಕೃತಕರಣ" ಮತ್ತು "ಕೃತಪರಿವರ್ಧನ"ವೇ ಬುದ್ಧಿಯ ಧರ್ಮವೆಂದು ಹೇಳಿ ಈ ಪ್ರಕರಣವನ್ನು ಉಪಸಂಹರಿಸುತ್ತಾನೆ.

ತತ್ತ್ವಂ ಭವತಿ [1]ಯತೋ
　　ಯತ್ಕಾರಣಮಾಪೂರಕಂ ಚ [2]ತತ್ತಸ್ಯ[2] ।
ಕಥಿತಾ ವ್ಯವಸ್ಥಿತಿ [3]ರಿಯಂ[3]
　　ನಿಖಿಲಾನಾಮೇವ ತತ್ತ್ವಾನಾಮ್ ॥೪॥ ೭೪

(ಯತಃ) ಯಾವುದಕ್ಕೆ (ಯತ್) ಯಾವುದು (ಕಾರಣಂ) ಕಾರಣ ಮತ್ತು (ಆ ಪೂರಕಂಚ) ಹೆಚ್ಚಿಸುವುದು (ಭವತಿ) ಆಗುತ್ತನೆಯೋ (ತತ್) ಆ ಪೂರಕವಾದುದು (ತಸ್ಯ) ಆಕಾರ್ಯಕ್ಕೆ (ತತ್ತ್ವಂ) ತತ್ತ್ವವು (ನಿಖಿಲಾನಾಂ) ಸಮಸ್ತವಾದ (ತತ್ತ್ವನಾಂ) ತತ್ತ್ವಗಳಿಗೆ (ಇಯಮೇವ ವ್ಯವಸ್ಥಿತಿಃ) ಈ ಸ್ಥಿತಿಯೇ (ಕಥಿತಾ) ಹೇಳಲ್ಪಟ್ಟಿದೆ.

ಈ ಪ್ರಕರಣವು ಯಾರಿಂದ ರಚಿತವಾಯಿತು ಎಂಬುದನ್ನು ಹೇಳುತ್ತಾನೆ—

ತತ್ತ್ವಾನಾಮಪಿ ತತ್ತ್ವಂ
　　ಯೇನಾಖಿಲಮೇವ [4]ಲೀಲಯಾ ಕಥಿತಮ್[4] ।
ಶ್ರೀ ಭೋಜದೇವ ನೃಪತಿ-
　　ರ್ವ್ಯಧತ್ತ ತತ್ತ್ವಪ್ರಕಾಶಂ ಸಃ ॥೫॥ ೭೫

(ಯೇನ) ಯಾವನಿಂದ (ತತ್ತ್ವಾನಾಂ ಅಖಿಲಂ ತತ್ತ್ವಂ) ಎಲ್ಲತತ್ತ್ವಗಳ ಸ್ವರೂಪವು (ಲೀಲಯಾ) ಲೀಲೆಯಿಂದ (ಕಥಿತಂ) ಹೇಳಲ್ಪಟ್ಟಿತೋ ಅಥವಾ ಜ್ಞಾಪಿಸಲ್ಪಟ್ಟಿತೋ (ಸಃ ಶ್ರೀ ಭೋಜದೇವನೃಪತಿಃ) ಆ ಭೋಜರಾಜನು (ತತ್ತ್ವಪ್ರಕಾಶಂ) ತತ್ತ್ವಪ್ರಕಾಶವೆಂಬ ಗ್ರಂಥವನ್ನು (ವ್ಯಧತ್ತ) ರಚಿಸಿದನು.

ಇದೇ ವಿಷಯವನ್ನು ವಿವರಿಸುತ್ತಾನೆ—

---

1 ತತೋ (ಕ) ಭವೇದ್ಯತ್ (ಗ) 2 ತತ್ತ್ವಸ್ಯ (ಕ) ತತ್ತ್ವಸ್ಯ (ಗ)
3 ಯನ್ನಿಖಿಲ (ಗ) 4 ಹೇಳಯಾ ಕಲಿತಂ (ಖ) ಹೇತುಯಾ ಕಥಿತಂ (ಗ)

यಸ್ಯಾ ಖಿಲಂ ಕರತಲಾಮಲಕಕ್ರಮೇಣ.
ದೇವಸ್ಯ ವಿಸ್ಫುರತಿ ಚೇತಸಿ ತತ್ತ್ವಜಾತಮ್ ।
ಶ್ರೀ ಭೋಜದೇವನೃಪತಿಃ ಸ [1]ಶಿವಾಗಮಾರ್ಥಂ[1]
ತತ್ತ್ವಪ್ರಕಾಶಮಸಮಾನಮಿದಂ ವ್ಯಧತ್ತ ॥೬॥ ೭೬

ತತ್ತ್ವಪ್ರಕಾಶಿಕೆಯಲ್ಲಿ ನಿವೃತ್ತಿ ಎಂಬ
ಷಷ್ಠಪರಿಚ್ಛೇದ ಮುಗಿದುದು.

---

[1] ಶಿವಾಗಮೋಕ್ತಂ (ಖ)

# ತತ್ತ್ವಪ್ರಕಾಶದಲ್ಲಿನ ಕಾರಿಕೆಗಳ ವರ್ಣಾನುಕ್ರಮಣಿ

# ತತ್ತ್ವಪ್ರಕಾಶಿಕೆಯ ವ್ಯಾಖ್ಯಾನದಲ್ಲಿ ಉದಾಹೃತ ಪ್ರಮಾಣಶ್ರುತಿ ಮತ್ತು ಶ್ಲೋಕಾನುಕ್ರಮಣಿ

# ಪಾರಿಭಾಷಿಕ ಶಬ್ದಕೋಶ

ಅರ್ಥಪಂಚಕ (ಪಾಶ)—ಮಲ, ಕರ್ಮ, ಮಹಾಮಾಯಾ, ಮಾಯಾಜನ್ಯ, ತಿರೋಧಾನಶಕ್ತಿ.

ಅಣು—ಜೀವಾತ್ಮ, ದೇಹ, ಪುರ್ಯಷ್ಟಕ ಪ್ರಾಣಗಳಿಗೆ ಆಶ್ರಯವಾದ ಪ್ರಮಾತೃ.

ಅಧ್ವಾ—ಮಾರ್ಗ. ಸಾಧಕನು ವಿಶ್ವವನ್ನು ಅನುಭವಾರೂಢವಾಗಿ ವಿಮರ್ಶಿಸುವ ಕ್ರಮ. ಅದು ಆರು ಬಗೆ. ಅವೇ ಷಡಧ್ವಗಳು. ಇವುಗಳಲ್ಲಿ ಮಂತ್ರ-ವರ್ಣ-ಪದಾಧ್ವಗಳು ವಾಚಕರೂಪ; ಕಲಾ-ತತ್ತ್ವ-ಭುವನಾಧ್ವಗಳು ವಾಚ್ಯರೂಪ.

ಅನಾದಿಮುಕ್ತ—ಪರಮಶಿವ.

ಅನುಗ್ರಹ—ಶಿವಕೃಪಾರೂಪ ಶಕ್ತಿಪಾತ. ಎಂದರೆ ವೃತ್ತಿಗಳು ಸಂಸ್ಕಾರರೂಪ ತೊರೆದು ಚಿತ್ತಿನಲ್ಲಿ ನಿಶ್ಶೇಷ ಲಯವಾಗುವುದು.

ಅವ್ಯಕ್ತ—ಪ್ರಕೃತಿ. ೨೪ನೆಯ ತತ್ತ್ವ. ಗುಣತ್ರಯ ಸಾಮ್ಯಾವಸ್ಥೆ.

ಅಷ್ಟಮಂಡಲಿಗಳು—ಕಲಾಮಸ್ತಕರಾದ ಗಹನೇಶ ಮುಂತಾದ ಎಂಟು ಮಂದಿ.

ಅಷ್ಟವಿದ್ಯೇಶ್ವರರು—ಅನಂತ, ಸೂಕ್ಷ್ಮ, ಶಿವೋತ್ತಮ. ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ, ಶಿಖಂಡಿ. ಇವರು ಕ್ರಮವಾಗಿ ಸೃಷ್ಟಿ-ಸ್ಥಿತಿ- ಲಯ-ತಿರೋಧಾನ ಮತ್ತು ಅನುಗ್ರಹಗಳಿಗೆ ಕರ್ತೃಗಳು.

ಅಸಮಾಪ್ತಕಲುಷ— ಅಪರಿಪಕ್ವಮಲವುಳ್ಳವರು. ಇವರೇ ಏಳುಕೋಟಿ ಮಂತ್ರದೇವತೆಗಳು.

ಅಹಂಕಾರ—'ನಾನು' ಎಂಬ ಭಾವ.

ಆಣವಮಲ—ಜೀವನಲ್ಲಿ 'ತಾನು ಅಪೂರ್ಣ' ಎಂಬ ಭಾವವನ್ನು ಉಂಟುಮಾಡುವ ಮಲ.

ಇಚ್ಛಾಶಕ್ತಿ—ಸಂಕಲ್ಪರೂಪವಾದದ್ದು.



ಈಶ್ವರತತ್ತ್ವ—ಶುದ್ಧ ತತ್ತ್ವಗಳಲ್ಲಿ ನಾಲ್ಕನೆಯದು. ಶಕ್ತಿತತ್ತ್ವವು ಇಚ್ಛಾ

ಶಕ್ತಿಗೆ ಬಹಿರಂಗಭೂತವೂ ಉದ್ರೇಕದಶೆಯನ್ನು ಹೊಂದಿದುದೂ ಆದ ಕ್ರಿಯಾಶಕ್ತಿಯಲ್ಲಿ ಪ್ರವೇಶಿಸಿ, ಅಂಕುರಾವಸ್ಥೆ ತಳೆದ ಬೀಜದಂತೆ "ಅಹಮಿದಂ" 'ನಾನು ಈ ಪ್ರಪಂಚ ಸ್ವರೂಪನು' ಎಂದು ಅಭಿಮಾನಿಸುವುದೇ "ಈಶ್ವರತತ್ತ್ವ. ಅಷ್ಟವಿದ್ಯೇಶ್ವರರು ಈಶ್ವರತತ್ತ್ವವಾಸಿಗಳು.

ಕಂಚುಕ—ಆತ್ಮನ ಸ್ವರೂಪವನ್ನು ಮರೆಮಾಡುವ ಆವರಣ. ಅವು ಐದು ಬಗೆ. ಕಲಾ-ವಿದ್ಯಾ-ರಾಗ-ಕಾಲ-ನಿಯತಿ ಎಂದು.

ಕಲಾ—ಕಿಂಚಿತ್ ಕರ್ತೃತ್ವರೂಪ ಶಕ್ತಿ.

ಕಾಲ—ಭೂತ-ಭವಿಷ್ಯದ್-ವರ್ತಮಾನಕಾಲಗಳ ವ್ಯವಹಾರಕ್ಕೆ ಕಾರಣವಾದುದು.

ಕರ್ಮೇಂದ್ರಿಯಪಂಚಕ— ವಾಕ್-ಪಾಣಿ-ಪಾದ-ಪಾಯು-ಉಪಸ್ಥ ತತ್ತ್ವಗಳು.

ಕ್ರೋಧೇಶಾದಿಗಳು—ಗುಣಮುಸ್ತ ಕರಾದ ಎಂಟುಮಂದಿ.

ಚಿತ್—ಚೈತನ್ಯಶಕ್ತಿ.

ಚಿತ್ತ—ಶಕ್ತಿಸಂಕೋಚರೂಪ ಪ್ರಕೃತಿ. ಇದು ವಿಕಲ್ಪಾದಿಗಳಿಗೆ ಆಶ್ರಯವಾದುದು.

ಜ್ಞಾನಶಕ್ತಿ—'ಆಮರ್ಷಾತ್ಮಕತಾ ಜ್ಞಾನಶಕ್ತಿಃ" ಎಲ್ಲವಸ್ತುಗಳನ್ನೂ ತನ್ನಲ್ಲಿ ಅಡಗಿಸಿಕೊಳ್ಳುವುದು. ತನ್ನನ್ನು ತಾನು ತಿಳಿಯುವ ಶಕ್ತಿ.

ಜ್ಞಾನೇಂದ್ರಿಯಪಂಚಕ—ಚಕ್ಷು-ಶ್ರೋತ್ರ-ಜಿಹ್ವಾ-ಘ್ರಾಣ-ತ್ವಕ್.

ತತ್ತ್ವಾಧ್ವ—ಪೃಥಿವಿ ಮೊದಲು ಶಿವತತ್ತ್ವದ ವರೆಗಿನ ೩೬ ತತ್ತ್ವಗಳು.

ತನ್ಮಾತ್ರಗಳು—ಶಬ್ದ-ಸ್ಪರ್ಶ-ರೂಪ-ರಸ-ಗಂಧ ತತ್ತ್ವಗಳು.

ತಿರೋಧಾನ—ಚಿತ್ತಿನಲ್ಲಿ ಅಖಂಡವಾಗಿದ್ದ ವಿಷಯಗಳನ್ನು ಭೇದರೂಪವಾಗಿ ಪ್ರಕಾಶಪಡಿಸುವ ಸ್ಥಿತಿ.

ತುರೀಯಾವಸ್ಥೆ—ಚಿನ್ಮಾತ್ರಾನುಭವಸ್ಥಿತಿ.

ನಿಯತಿ—ಈ ಕಾರಣದಿಂದ ಈ ಕಾರ್ಯವೇ ಹುಟ್ಟುವುದು; ಮತ್ತೊಂದು ಹುಟ್ಟುವುದಿಲ್ಲ ಎಂಬ ನಿಯಮಕ್ಕೆ ಕಾರಣವಾದುದು.

ಪಂಚಕೃತ್ಯಗಳು—ಸೃಷ್ಟಿ-ಸ್ಥಿತಿ-ಲಯ-ತಿರೋಧಾನ-ಅನುಗ್ರಹಗಳು.

ಪಂಚ ಮಂತ್ರತನು— ಸದ್ಯೋಜಾತ-ವಾಮದೇವ-ಅಘೋರ-ತತ್ಪುರುಷ-ಈಶಾನಮಂತ್ರಗಳೇ ಶರೀರವಾಗಿ ಉಳ್ಳವನು.

ಪತಿ—ನಿಯಾಮಕ ಪ್ರಭು.

ಪಶು—ಪಾಶಬದ್ಧ ಜೀವ.

ಪಾಶಚತುಷ್ಟಯ—ಮಲ, ಕರ್ಮ, ಮಾಯಾಜನ್ಯ, ತಿರೋಧಾನಶಕ್ತಿ.

ಪುರುಷ—ಮಾಯಾಶಕ್ತಿ ಪ್ರವೇಶಿಸಿದ ಶಿವಾಂಶ.

ಪುರ್ಯಷ್ಟಕ—ಪಂಚತನ್ಮಾತ್ರಗಳು (ಶಬ್ದ-ಸ್ಪರ್ಶ-ರೂಪ-ರಸ-ಗಂಧ) ಮತ್ತು ಮನಸ್ಸು, ಬುದ್ಧಿ, ಅಹಂಕಾರ ಎಂಬ ಎಂಟು ತತ್ತ್ವಗಳ ಸೂಕ್ಷ್ಮ ಶರೀರ.

ಪ್ರತ್ಯಾಹಾರ—ಪ್ರವೃತ್ತಿಗಳನ್ನು ವಿಷಯಗಳಿಂದ ಹಿಂದಿರುಗಿಸುವುದು.

ಪ್ರಮಾ— ಸ್ವಚ್ಛ ತಿಳುವಳಿಕೆ. ಉದಾ— ಬೆಳ್ಳಿಯನ್ನು ಬೆಳ್ಳಿಎಂದೇ ತಿಳಿಯುವುದು.

ಪ್ರಮಾತೃ—ಸ್ವಯಂಪ್ರಕಾಶ ತಿಳಿವುಳ್ಳವನು.

ಪ್ರಮಾಣ—ನಿಜವಾದ ತಿಳುವಿಗೆ ಸಾಧನವಾದ ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಾಬ್ದ ಮುಂತಾದ ಪ್ರಮಾಣಗಳು.

ಪ್ರಳಯಕೇವಲರು—ಪಶುತತ್ತ್ವಪ್ರಭೇದಗಳಲ್ಲಿ ಒಂದು. ಇವರು ಮಲ ಮತ್ತು ಕರ್ಮಗಳಿಂದ ಕೂಡಿದವರು.

ಪ್ರಳಯಾಕಲರು—ಪ್ರಳಯ+ಅಕಲ ಎಂದು ಪದ ವಿಭಾಗ. ಎಂದರೆ ಪ್ರಳಯದಲ್ಲಿ ಕಳೆಯು ಅಳಿದು ಮಲ ಮತ್ತು ಕರ್ಮ ಮಾತ್ರ ಉಳಿದವರು. ಇವರಲ್ಲಿ ಮಲ-ಕರ್ಮಪಕ್ವವಾದವರು ದೀಕ್ಷೆಹೊಂದಿ ಮುಕ್ತರಾಗುತ್ತಾರೆ. ಇವರೇ ಪರಮುಕ್ತರು.

ಬಂಧ—ಜನನಮರಣಾತ್ಮಕವಾದುದು.

ಬಿಂದು-ನಾದ—ಘನೀಭೂತ ಶಕ್ತಿಯು ಹೊರ ಹೊಮ್ಮುವುದಕ್ಕೆ ಮುಂಚಿನ ಸ್ಥಿತಿ. ಎಂದರೆ "ಅಹಂ ಇದಂ" ಪ್ರಕಾಶದ ಪೂರ್ವದ ಸ್ಥಿತಿ. ಅ > ಶಿವ, ಹ < ಶಕ್ತಿ; ಶಿವನು ಶಕ್ತಿಯ ಮೂಲಕ ಪ್ರಪಂಚ ರೂಪವಾಗಿ ಅಭಿವ್ಯಕ್ತವಾಗುವುದಕ್ಕೆ ಮುಂಚೆ 'ಅವಿಭಾಗ ವೇದನಾತ್ಮಕ ಬಿಂದು ರೂಪವಾಗಿ ಅಭಿವ್ಯಕ್ತವಾದ ಪ್ರಕಾಶ. ತೇಜಸ್ಸು ಸ್ಫುರಿಸಿ ಪ್ರವಾಹರೂಪವಾಗಿ ಚಿಮ್ಮಿದರೆ 'ನಾದ' ವೆನಿಸುತ್ತದೆ. ನಾದವೇ ಮುಂದಿನಚಲನವಲನಗಳಿಗೆ ಕಾರಣ.

ಭಕ್ತಿ—ಮಾಹನೀಯ ವಿಷಯಕವಾದ ಪ್ರೀತಿ ಅಥವಾ ಜಗತ್ತಿನ ಸೃಷ್ಟಿ (ಪ್ರವೃತ್ತಿ) ಗೆ ಕಾರಣವಾದ ಶಿವಶಕ್ತಿಯೇ ನಿವೃತ್ತಿ ಮಾರ್ಗದಲ್ಲಿ ಜೀವನನ್ನುಉದ್ಧರಿಸಲು ಭಕ್ತಿರೂಪುತಳೆಯುತ್ತದೆ.

ಭುವನಾಧ್ವ—ಷಡಧ್ವಗಳಲ್ಲಿ ಮೊದಲನೆಯದು. ಅನಾಶ್ರಿತಭುವನವೇ ಮುಂತಾದ ೨೨೪ ಭುವನಗಳು.

ಬುದ್ಧಿ—ನಿಶ್ಚಯಕ್ಕೆಕಾರಣವಾದಮನಸ್ಸಿನ ಪ್ರವೃತ್ತಿ.

ಮಂತ್ರ—ಅಕ್ಷರರಾಶಿ. ಅಕಾರಾದಿ ಕ್ಷಕಾರದ ವರೆಗಿನ ಅಕ್ಷರಗಳೆಲ್ಲ ಮಂತ್ರಗಳೇ. 'ಮಂತ್ರವರ್ಣಾತ್ಮಕಾಸ್ಸರ್ವೇ, ಸರ್ವೇ ವರ್ಣಾ ಶಿವಾತ್ಮಕಾಃ' ಅಕ್ಷರಗಳು ಚಿತ್‌ಸಂಸರ್ಗದಿಂದ ಮಂತ್ರತ್ವವನ್ನು ಹೊಂದುತ್ತವೆ. 'ಮಂತಾರಂ ತ್ರಾಯತ ಇತಿ ಮಂತ್ರಃ' ಎಂದರೆ ಮಂತ್ರವನ್ನು ಅನುಸಂಧಾನಮಾಡುವವನು ಮಾಹೇಶನಾಗುತ್ತಾನೆ.

ಮನಸ್ಸು—ಸಂಕಲ್ಪವಿಕಲ್ಪಗಳಿಗೆ ಕಾರಣವಾದದ್ದು.

ಮಲ—ಶಿವಶಕ್ತಿ ಸಂಕೋಚರೂಪವಾದ ಆಣವ, ಮಾಯಾ ಮತ್ತು ಕಾರ್ಮ ಎಂಬ ಮೂರು ಮಲಗಳು.

ಮಾಯಾ—ಶುದ್ಧವಿದ್ಯಾತತ್ತ್ವವೇ ಮಯೂರಾಂಡರಸ ನ್ಯಾಯ (ನವಿಲಿನ ತತ್ತಿಯ ರಸದಲ್ಲಿ ಪಾದ-ಪಕ್ಷ-ವರ್ಣವೈಚಿತ್ರ್ಯಗಳು ಸೂಕ್ಷ್ಮವಾಗಿರು) ದಂತೆ ತನ್ನಲ್ಲಿ ಅಡಕವಾಗಿರುವ ಭಾವೀ ಪ್ರಪಂಚ ನಿರ್ಮಾಣಕ್ಕೆ ಕಾರಣವಾದ ಭೂತ ಸೂಕ್ಷ್ಮ ಪದಾರ್ಥಗಳಲ್ಲಿ ಅನ್ಯೋನ್ಯಾಭಾವರೂಪ ಭೇದ ಬುದ್ಧಿಯೇ ಪ್ರಧಾನವಾಗಿ ಉಳ್ಳದ್ದು.

ಮಾಯಾಮಲ—ಇಚ್ಛಾಶಕ್ತಿಯ ಸಂಕೋಚ; ಅಭಿನ್ನವಾದ ಚಿತ್ತು ಭಿನ್ನವಾದ ತಿಳುವಳಿಕೆ ಸ್ವೀಕರಿಸುವಿಕೆ. ಭಿನ್ನವೇದ್ಯಪ್ರಥಾ; ಭೇದದೃಷ್ಟಿ, ಭೇದಭಾವಗಳು ಪಂಚಕಂಚುಕಗಳಿಂದ ಕೂಡಿ ಶರೀರ ಮತ್ತು ಇಂದ್ರಿಯಗಳಿಗೆ ಅಧೀನವಾಗಿರುವುದಕ್ಕೆ ಕಾರಣವಾದದ್ದು.

ಮೋಕ್ಷ (ಮುಕ್ತಿ)—ಶಿವಸಮಾನತಾರೂಪಸ್ಥಿತಿ. ವಿಶ್ವೋತ್ತೀರ್ಣ ಪರಮ ಶಿವೀಭಾವ.

ರಾಗ—ಸ್ರಕ್-ಚಂದನ-ವನಿತಾದಿ ವಿಷಯಗಳಲ್ಲಿರುವ ಅನುರಾಗ.

ವರ್ಣಾಧ್ವ—ಐವತ್ತೆರಡು ಅಕ್ಷರ ರಾಶಿಯಾದುದು.

ವಿಜ್ಞಾನ ಕೇವಲರು—ಪಶುಪ್ರಭೇದಗಳಲ್ಲಿ ಒಂದು. ಇವರು ಸಮಲರು.

ವಿಜ್ಞಾನಾಕಲ—ಸಪ್ತ ಪ್ರಮಾತೃಗಳಲ್ಲಿ ಚಿನ್ಮಾತ್ರನಾಗಿರುತ್ತಾನೆ. ಸಹಜಾವಸ್ಥೆ.

ವಿದ್ಯಾ—ಕಿಂಚಿಜ್ಞತ್ವರೂಪಶಕ್ತಿ. ಸಪ್ತಕೋಟಿ ಮಹಾಮಂತ್ರಗಳೂ, ಕಾಮಿಕಾದಿ ಆಗಮಗಳೂ ವಿದ್ಯಾತತ್ತ್ವದಲ್ಲಿವೆ.

ವಿಮರ್ಶನ—ಅನುಗ್ರಹ.

ವೀರೇಶ—ಜಾಗ್ರತ್-ಸ್ವಪ್ನ-ಸುಷುಪ್ತಿಗಳಲ್ಲಿ ತುರೀಯಾನುಸಂಧಾನಮಾಡುತ್ತಿರುವವನು. ಇಂದ್ರಿಯಗಳಿಗೆ, ಶತರುದ್ರರಿಗೆ ಒಡೆಯ.

ಶಕ್ತಿಪಾತ—ಶಿವಾನುಗ್ರಹ. ವಿಲಾಸನ, ಶಕ್ತಿಯ ಆವಿಷ್ಕರಣದಿಂದ ಶಿವಕೃಪೆಯಾಗುತ್ತದೆ.

ಶಕ್ತಿವಿಕಾಸ—ಒಳಗೆ ಅಡಗಿರುವ ಶಕ್ತಿಗಳನ್ನು ಭೈರವೀ ಮೊದಲಾದ ಮುದ್ರೆಗಳಿಂದ ಹೊರಗೆ ಪ್ರಸರಿಸುವುದು.

ಶಕ್ತಿಸಂಕೋಚ—ಇಂದ್ರಿಯಗಳ ಮೂಲಕ ಪ್ರಸರಿಸುತ್ತಿರುವ ಶಕ್ತಿಗಳನ್ನು ಆಮೆ ತನ್ನ ಅವಯವಗಳನ್ನು ಒಳಕ್ಕೆ ಎಳೆದುಕೊಳ್ಳುವಂತೆ ಹೃತ್ಪ್ರದೇಶಕ್ಕೆ ಸೇರಿಸಿಕೊಳ್ಳುವುದು.

ಶುದ್ಧವಿದ್ಯಾ—ಸಾಗರ ತರಂಗನ್ಯಾಯದಂತೆ 'ಅಲೆ–ಕಡಲು'ಗಳಿಗೆ ಅಭೇದವಿರುವಂತೆ 'ಅಹಮಿದಂ' ನಾನು ಎಂಬ ಅಹಂಕಾರಕ್ಕೂ ಇದಂ ಎಂಬ ಪ್ರಪಂಚಕ್ಕೂ ಇರುವ ಅಭೇದಜ್ಞಾನ. ಇದೇ ಮುಕ್ತಿಗೆ ಕಾರಣವಾದ ಜ್ಞಾನ.

ಶುದ್ಧಾಧ್ವ—ಶಿವ-ಶಕ್ತಿ-ಸದಾಶಿವ-ಈಶ್ವರ ಮತ್ತು ಶುದ್ಧವಿದ್ಯಾತತ್ತ್ವಗಳು. ಇಲ್ಲಿ ಗ್ರಾಹ್ಯಗ್ರಾಹಕಭಾವಗಳು ವಿಶದವಾಗಿರುವುದಿಲ್ಲ. ಆಣವಮಲಕ್ಕೆ ಮಾತ್ರ ಇಲ್ಲಿ ಅವಕಾಶ.

ಶತರುದ್ರರು—ತ್ರಿಭುವನಪಾಲಕರಾದವರು. ಶತರುದ್ರೀಯ ಪ್ರಸಿದ್ಧರು.

ಶ್ರೀಕಂಠ—ಗುಣತತ್ತ್ವದಲ್ಲಿದ್ದು, ಕೆಳಗಣ ಭುವನಕರ್ತೃವಾಗಿರುತ್ತಾನೆ.

ಸಕಲ—ಸಕಲರು ಎರಡು ಬಗೆ. ಮೊದಲನೆಯವರು ಮಲ ಮಾಯಾ ಕರ್ಮಯುತರು. ಇವರೇ ಸಂಸಾರಿಗಳು. ಎರಡನೆಯವರು ಪ್ರಳಯದಲ್ಲಿ ಅಪಕ್ವಮಲ ಸಮನ್ವಿತರು. ಇವರು ಸ್ಥೂಲದೇಹವಶರಲ್ಲ. ಪುರ್ಯ

ಷ್ಟಕ ಸೂಕ್ಷ್ಮದೇಹವುಳ್ಳವರು. ಇವರಲ್ಲಿ ೧೧೮ ಮಂದಿಯನ್ನು ಶಿವನು ಮಂತ್ರಮಹೇಶರನ್ನಾಗಿ ಮಾಡುತ್ತಾನೆ. ಉಳಿದವರು ಭುವನಪತಿಗಳಾಗುತ್ತಾರೆ.

ಸದಾಶಿವತತ್ತ್ವ—ಶಕ್ತಿತತ್ತ್ವವು ಇಚ್ಛಾಶಕ್ತಿಗೆ ಅಂತರಂಗವಾದ ಜ್ಞಾನಶಕ್ತಿಯ ಉದ್ರೇಕಾವಸ್ಥೆಯಲ್ಲಿ ಪ್ರವೇಶಿಸಿ, ನೆನೆದು ಉಬ್ಬಿದ ಕಡಲೆಯಂತೆ ಉದ್ರಿಕ್ತಜ್ಞಾನಶಕ್ತಿಯನ್ನು ಆವರಿಸಿ 'ಅಹಂಮಿದಂ' 'ನಾನು ಈ ಪ್ರಪಂಚವು' ಎಂದು ಅಭಿಮಾನಿಸುವುದು. ಸ್ಥೂಲಬಿಂದು ಮತ್ತು ಸ್ಥೂಲಧ್ವನಿರೂಪನಾದ ಇವೆರಡೂ ಈ ತತ್ತ್ವವನ್ನು ಆಶ್ರಯಿಸಿಕೊಂಡಿವೆ.

ಸಮಾಧಿ—ಜೀವನು ಬದ್ಧನಾಗಿರುವಾಗಲೇ ನಿರ್ದಿಷ್ಟಕಾಲದವರೆಗೆ ಪರಮಾತ್ಮನ ಸಂಬಂಧ ಪಡೆವುದು.

ಸಮಾಪ್ತಕಲುಷರು—ಪರಿಪಕ್ವಮಲರು. ಇವರು ಶಿವಾನುಗ್ರಹದಿಂದ ಮಲಮುಕ್ತರಾಗಿ ಅಷ್ಟವಿದ್ಯೇಶ್ವರತ್ವ ಪಡೆವುದು. ಇದು ಮುಕ್ತಿಗೆ ಸಮ.

ಸಾದಾಖ್ಯ—ಅಖಂಡ ಗೋಳಾಕಾರ ತೇಜೋಮೂರ್ತಿ ಮಹಾಲಿಂಗದಿಂದ ಪಂಚಸಾದಾಖ್ಯಗಳು ಹುಟ್ಟುತ್ತವೆ. ಅವು ಶಿವ, ಅಮೂರ್ತ, ಮೂರ್ತ, ಕರ್ತೃ, ಕರ್ಮಸಾದಾಖ್ಯಗಳೆಂದು ಐದು ಬಗೆ. ಇವು ಕ್ರಮವಾಗಿ ಸದಾಶಿವ, ಈಶ, ಬ್ರಹ್ಮ, ಈಶ್ವರ ಮತ್ತು ಈಶಾನ ಎಂದು ಕರೆಯಲ್ಪಡುತ್ತವೆ.


೧ ಪಾಶುಪತ
೧ ಪತಿ (ಪರಾಶಕ್ತಿ ವಿಶಿಷ್ಟ ಪರಶಿವ)
೨ ಪಶು (ಅಣು)
೩ ಪಾಶ
(ಅರ್ಥಪಂಚಕ)


ಪತಿಯ ಪಂಚಕೃತ್ಯಗಳು
ಸೃಷ್ಟಿ
ಸ್ಥಿತಿ
ಲಯ
ತಿರೋಧಾನ
ಅನುಗ್ರಹ


೨ ಪಶು
೧ ವಿಜ್ಞಾನ ಕೇವಲರು
(ಸಮಲರು)
೨ ಪ್ರಳಯ ಕೇವಲರು
(ಮಲ-ಕರ್ಮಯುತರು)
೩ ಸಕಲರು (i)
(ಮಲ-ಮಾಯಾ-ಕರ್ಮ
ಯುತರು)
(ಅಪರಿಪಕ್ವಮಲರು)
ಇವರೇ
ಸ್ಥೂಲದೇಹ ವಶರಾದ ಸಂಸಾರಿಗಳು

೧ ವಿಜ್ಞಾನ ಕೇವಲರು
(ಸಮಲರು)

ಸಮಾಪ್ತ ಕಲುಷರು
(ಪರಿಪಕ್ವಮಲರು)
ಇವರು ಶಿವಾನುಗ್ರಹದಿಂದ ಮಲ
ಮುಕ್ತರಾಗಿ ಅಷ್ಟವಿದ್ಯೇಶ್ವರತ್ವ
ಪಡೆಯುವರು.
(ಇದು ಮುಕ್ತಿಗೆ ಸಮ)

ಅಸಮಾಪ್ತ ಕಲುಷರು
(ಅಪರಿಪಕ್ವಮಲರು)
ಇವರು ಏಳುಕೋಟಿ ಮಂತ್ರ
ದೇವತೆಗಳಾಗುತ್ತಾರೆ.

೨ ಪ್ರಳಯ ಕೇವಲರು
(ಮಲ-ಕರ್ಮಯುತರು)

ಪ್ರಳಯಾಕಲರು
(ಪ್ರಳಯದಲ್ಲಿ ಕಲೆ ಅಳಿದು ಮಲ-
ಕರ್ಮ ಮಾತ್ರ ಉಳಿದವರು.
ಇವರಲ್ಲಿ ಮಲ-ಕರ್ಮ ಪಕ್ವ
ರಾದವರು ದೀಕ್ಷೆ ಪಡೆದು ಮುಕ್ತ
ರಾಗುತ್ತಾರೆ)
(ಪರಮುಕ್ತರು)

ಸಕಲರು (ii)
(ಪರಿಪಕ್ವಮಲರು)
ಮಿಶ್ರಾಧ್ವದ ಅಧಿಕಾರಕ್ಕೆ ಯೋಗ್ಯ
ವಾದ ಮಾಯಾದೇಹದಿಂದ ಸಕಲ
ರಾದವರು. ಇವರು ಸ್ಥೂಲ ದೇಹ
ವಶರಲ್ಲ. ಪುರ್ಯಷ್ಟಕ ಸೂಕ್ಷ್ಮ
ದೇಹ ವಶರು. ಇವರಲ್ಲಿ ೧೧೮ ಮಂದಿ
ಮಂತ್ರಮಹೇಶರಾಗುವರು. ಉಳಿ
ದವರು ಭುವನಪತಿಗಳಾಗುತ್ತಾರೆ.
ಇವರಲ್ಲಿ ಪರಿಪಕ್ವಮಲರಿಗೆ ಶಿವನು
ದೀಕ್ಷೆಯಿತ್ತು ಶಿವಸಾಮ್ಯರೂಪ
ಮುಕ್ತಿ ಕೊಡುತ್ತಾನೆ
(ಅಪರಮುಕ್ತರು)

### ೩ ಪಾಶ (ಅರ್ಥಪಂಚಕ)



ಮಲ | ಕರ್ಮ | ಮಹಾಮಾಯಾ | ಮಾಯಾಜನ್ಯ | ತಿರೋಧಾನ ಶಕ್ತಿ

ಅಥವಾ

ಪಾಶ ಚತುಷ್ಟಯ



**ಮಲ**
ಇದು ಅಕ್ಕಿಯ ಮೇಲಣ
ತವುಡಿನಂತೆ ಜ್ಞಾನ
ಕ್ರಿಯಾರೋಧಕ

**ಕರ್ಮ**
ಧರ್ಮಾಧರ್ಮಾತ್ಮಕ
ಇದು ಕರ್ಮಜ
ಶರೀರಕ್ಕೆ ಕಾರಣ

**ಮಾಯಾಜನ್ಯ**
ಕಲಾದಿಗಳು
ಇದು ಆಗಂತುಕ ಪಾಶ;
ವಸ್ತುರೂಪ-ವಿಶ್ವದ ಮೂಲ

**ತಿರೋಧಾಯಕ ಶಕ್ತಿ**
ಇದು ಪರಶಿವನಿಗೆ ಭೋಗವನ್ನು
ಕೊಡುವ ಶಕ್ತಿ. ಪಾಶವನ್ನು ಅನುಗ್ರಹಿ
ಸುವುದರಿಂದ ಇದಕ್ಕೆ 'ಪಾಶ'ವೆಂದು
ವ್ಯವಹಾರ

# ಪುಸ್ತಕ ವಿಮರ್ಶೆಗಳು

## ವೈದಿಕ ಷಟ್‌ಸ್ಥಲ ಲಿಂಗಪೂಜಾವಿಧಿ

ಆಧ್ಯಾತ್ಮಿಕತೆ, ದೈವಭಕ್ತಿ, ಜಪ, ಪೂಜೆಗಳು ಮರೆಯಾಗುತ್ತಿರುವ ಈ ಕಾಲದಲ್ಲಿ ಇಂಥ ವಿಷಯಗಳಲ್ಲಿ ಬಹಳ ಸೀಮಿತ ಜನ ಆಸಕ್ತರಾಗಿರುವ ಸಂಗತಿ ಆಶಾದಾಯಕವಾಗಿರುವುದರ ಜೊತೆಗೆ, ಇಂಥ ಸೀಮಿತ ಆಸಕ್ತರಿಗೆ ತಮ್ಮ ಆಚರಣೆಯ ಅರ್ಥ ತಿಳಿಯಲು ಸಹಾಯಕ ವಾಗುವ ಮಾರ್ಗದರ್ಶಿಕೆಗಳು ಬಹಳ ಅಗತ್ಯವೆನ್ನಬಹುದು. ಇಂಥ ಅಗತ್ಯದ ಮಾರ್ಗದರ್ಶಿಕೆಗಳ ಸಾಲಿನಲ್ಲಿ "ಷಟ್‌ಸ್ಥಲ ಲಿಂಗಪೂಜಾ ವಿಧಿ" ಪುಸ್ತಕವನ್ನು ಸಂತಸದಿಂದ ಸ್ವಾಗತಿಸ ಬಹುದು.

ಪೂಜೆ, ಜಪ, ಆಚರಣೆ, ಮಂತ್ರಪಠನ: ಇತ್ಯಾದಿಗಳಲ್ಲಿ ಆಸಕ್ತಿ ಕಡಿಮೆಯಾಗಲು ಕಾರಣ ಬಹುಶಃ ಅವುಗಳನ್ನು ಕುರಿತಾದ ಸಂಕೀರ್ಣತೆ ಯಿಂದ ಕೂಡಿದ ಕಟ್ಟುನಿಟ್ಟುತನ, ಆಚರಣೆಯ ದುರೂಹತೆಗಳೇ ಇರ ಬಹುದು. ತಾನು ಉಚ್ಚರಿಸುವ ಮಂತ್ರದ ಅರ್ಥ ಗೃಹಸ್ಥನಿಗೆ ತಿಳಿದಿರುವು ದಿರಲಿ, ಪುರೋಹಿತರಿಗೇ ತಿಳಿಯದಿರುವ ಸಂದರ್ಭಗಳು ಬಹಳ.

ಪ್ರಸ್ತುತ "ಲಿಂಗಪೂಜಾ ವಿಧಿಯಲ್ಲಿ ವೀರಶೈವ ಸಂಪ್ರದಾಯಸ್ಥರಿಗೆ ಅಗತ್ಯವಾದ ಪೂಜಾ ಮಂತ್ರಗಳನ್ನು ಅರ್ಥಸಹಿತ ಸಂಗ್ರಹಿಸಿ ವೈದಿಕ ಮಾರ್ಗಾವಲಂಬಿಗಳಿಗೆ ಸಹಾಯ ಮಾಡಿದ್ದಾರೆ. ಶ್ರೀ ಆರಾಧ್ಯರು.

ಸಂಪ್ರದಾಯ ನಿಷ್ಠರಾದ, ಶಾಕ್ತ ಶೈವ ವೈಷ್ಣವ ಧರ್ಮಗಳ ಪರಿಚಯವಿರುವ ಲೇಖಕರು ಪೂಜಾಕಾಲದಲ್ಲಿ ಉಚ್ಚರಿಸುವ ಮಂತ್ರಗಳಿಗೆ ಅರ್ಥವನ್ನು ಮಾತ್ರವಲ್ಲ, ತತ್ಸಂಬಂಧವಾದ ವಿಶಿಷ್ಟವನ್ನೂ ಪುಸ್ತಕದಲ್ಲಿ ಸಂಗ್ರಹಿಸಿದ್ದಾರೆ.

ಎಲ್ಲ ವಿಧದಿಂದಲೂ ಪುಸ್ತಕ ಪಂಡಿತರಿಗೂ ಸಂಗ್ರಾಹ್ಯವಾದುದು.

ಕನ್ನಡಪ್ರಭ — 'ರಸಿಕ' ಪುತ್ತಿಗೆ.

೮-೧-೭೩

ವೀರಶೈವಾಗಮ ಪ್ರಯೋಗರತ್ನ

ದೇವತಾ ಪ್ರತಿಷ್ಠೆ, ದೇವಾಲಯಗಳಲ್ಲಿ ಆಚರಿಸುವ ಮಹೋತ್ಸವಾದಿಗಳು, ಬಗೆಬಗೆಯ ಶಾಂತಿಕರ್ಮಗಳು; ವರಸಿದ್ಧಿ ವಿನಾಯಕ, ಮಂಗಳಗೌರೀ, ಮುಂತಾದ ಮತಾಚರಣೆಗಳು-ಎಲ್ಲವೂ ಶ್ರದ್ಧಾಳುಗಳಾದ ಆಸ್ತಿಕರಲ್ಲಿ ಪರಂಪರಾಗತವಾಗಿ ಬಂದಿರುವ ಧಾರ್ಮಿಕ ಸಂಪ್ರದಾಯಗಳಾಗಿವೆ. ಇವಕ್ಕೆ ಆವಶ್ಯವಾದ ಮಂತ್ರ, ತಂತ್ರ ಆಗಮಾದಿಗಳಲ್ಲಿ ಪ್ರಾವೀಣ್ಯ ಮತ್ತು ತರಬೇತಿ ಪಡೆಯಲು ಪುರೋಹಿತ ವರ್ಗದವರಿಗೆ ಹಿಂದೆ ಆನುವಂಶಿಕವಾಗಿ ಇರುತ್ತಿದ್ದ ಸೌಲಭ್ಯಗಳು ಇಂದು ಮರೆಯಾಗುತ್ತಿವೆಯಾಗಿ ಯೋಗ್ಯ ಪುರೋಹಿತರ ಅಭಾವ ಎಲ್ಲೆಡೆಗೂ ಕಾಣಬರುತ್ತದೆ. ಈ ಕೊರತೆಯನ್ನು ನಿವಾರಿಸಲು ಮೈಸೂರು ಸರ್ಕಾರದ ಮುಜರಾಯಿ ಇಲಾಖೆಯವರು ಶೈವ, ವೈಷ್ಣವ, ವೀರಶೈವ ಮುಂತಾದ ಆಗಮ ವಿಧಾನಗಳಲ್ಲಿ ವರ್ಗಗಳನ್ನೂ ಪರೀಕ್ಷೆಗಳನ್ನೂ ನಡೆಯಿಸುತ್ತಿರುವುದು ಸ್ತುತ್ಯ. ಆದರೆ ಸಂಸ್ಕೃತ ಭಾಷಾಜ್ಞಾನ, ಉಚ್ಚಾರಣಾ ಶುದ್ಧಿ ಎಲ್ಲವೂ ಶಿಥಿಲವಾಗುತ್ತಿರುವ ಇಂದಿನ ವರ್ಗಕ್ಕೆ ಯೋಗ್ಯ ಪಠ್ಯಪುಸ್ತಕಗಳ ಕೊರತೆಯನ್ನು ನಿವಾರಿಸಲು ಖ್ಯಾತನಾಮರಾದ ಲೇಖಕರು ಪ್ರಯತ್ನಿಸಿರುವುದು ಸ್ವಾಗತಾರ್ಹ.

ಇದರಲ್ಲಿನ ಐದು ಪ್ರಕರಣಗಳಲ್ಲಿ ಮೊದಲನೆಯದು ಶಿವಲಿಂಗ, ದೇವಿ, ವಿನಾಯಕ, ಸ್ಕಂದ, ವೀರಭದ್ರ, ನಾಗ, ನವಗ್ರಹ ಇತ್ಯಾದಿಗಳ ಪ್ರತಿಷ್ಠಾವಿಧಿಗಳನ್ನೂ ಎರಡನೆಯದು ಗಿರಿಜಾಕಲ್ಯಾಣ ಮುಂತಾದ ಮಹೋತ್ಸವಗಳ ಆಚರಣಾ ವಿಧಿಯನ್ನೂ ಒಳಗೊಂಡಿದೆ. ಉಗ್ರಶಾಂತಿಯೇ ಮೊದಲಾದುವುಗಳ ನಿರೂಪಣೆಗೆ ಮೂರನೆಯದು ಮೀಸಲು. ಸಾಭಾರಿ ನಿರಾಭಾರಿ ಇತ್ಯಾದಿ ಧರ್ಮಾಧಿಕಾರಗಳನ್ನು ಕುರಿತದ್ದು ನಾಲ್ಕನೆಯದು. ವ್ರತವಿಧಿ ಕಥಾಭಾಗ ಸಹಿತವಾಗಿ ಕಡೆಯದರಲ್ಲಿದೆ.

ಉಕ್ತವಾದ ವಿಧಿಗಳಿಗೆ ಅಂಗವಾಗಿ ಬರುವ ವೈದಿಕ, ಆಗಮಿಕ ಮಂತ್ರಗಳನ್ನೆಲ್ಲ ಸ್ವರಸಹಿತವಾಗಿ ಅನುಬಂಧದಲ್ಲಿ ಕೊಡಲಾಗಿದೆ. ಹೀಗೆ ಇದು ವೀರಶೈವಾಚಾರದಲ್ಲಿ ಆಸ್ಥೆಯುಳ್ಳವರಿಗೆಲ್ಲ ವಿಶ್ವಕೋಶವೂ, ಆಗಮ ವಿದ್ಯಾರ್ಥಿಗಳಿಗೆ ಉತ್ತಮ ಪಠ್ಯಗ್ರಂಥವೂ ಆಗಿದೆ. ಇದೇ ರೀತಿ ಮಿಕ್ಕ ಆಗಮಿಕ ಪಠ್ಯಗ್ರಂಥಗಳೂ ಬರಲೆಂದು ಆಶಿಸುತ್ತೇವೆ.

ಪ್ರಜಾವಾಣಿ
೫-೧೦-೬೯

—ಡಾ॥ ಕೆ. ಕೃಷ್ಣಮೂರ್ತಿ